# ಸಿದ್ಧಗಂಗಾ

ಸಂಪುಟ–27. ಸಂಚಿಕೆ–6. ಜೂನ್–1991.



ತಾ : 9–6-91 ರಂದು ಶ್ರೀ ಮಠದಲ್ಲಿ ನಡೆದ ಡಾ|| ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಪೀಠಾರೋಹಣ ಪೂರ್ವಸಿದ್ಧತಾ ಸಮಾರಂಭದಲ್ಲಿ ಪ್ರಖ್ಯಾತ ನೇತ್ರದಾನಿ ಡಾ|| ಎಂ. ಸಿ. ಮೋದಿಯವರು ಮಾತನಾಡುತ್ತಾ ಶ್ರೀ ಶ್ರೀ ಗಳವರ ಕಾರ್ಯವನ್ನು ಇಡೀ ಜಗತ್ತಿನಲ್ಲಿ ಯಾರೂ ಮಾಡಿಲ್ಲ. ಈ ಯೋಜಿತ ಮಹೋತ್ಸವ ಯಶಸ್ವಿಯಾಗಲು ಸರ್ವರ ನೆರವು ಸಹಕಾರವನ್ನು ಸಭೆಯಲ್ಲಿ ಕೋರಿ ಮಾತನಾಡುತ್ತಿರುವುದು.

ಪ್ರಕಾಶಕರು:
ಹಳೆಯ ವಿದ್ಯಾರ್ಥಿಗಳ ಸಂಘ,
ಸಿದ್ಧಗಂಗಾ ಕ್ಷೇತ್ರ.



ವಜ್ರಮಹೋತ್ಸವ ಕಾರ್ಯದರ್ಶಿಗಳಾದ ನಿವೃತ್ತ ಐ. ಪಿ. ಎಸ್. ಅಧಿಕಾರಿಗಳಾ
ಶ್ರೀ ಎಸ್. ಎಸ್. ಹಸಬಿ ಯವರು, ಅಧ್ಯಕ್ಷರಾದ ಪದ್ಮಶ್ರೀ ಡಾ|| ಎಂ. ಸಿ. ಮೋ
ಯವರು, ಸಮಾರಂಭದಲ್ಲಿ ಅಧ್ಯಕ್ಷತೆ ವಹಿಸಿದ್ದ ರಾಜ್ಯದ ಕೃಷಿ ಮತ್ತು ತೋಟಗಾರಿ
ಸಚಿವರಾದ ಮಾನ್ಯ ಶ್ರೀ ಎಚ್. ಪುಟ್ಟಸ್ವಾಮಿಗೌಡರು ಹಾಗೂ ಶ್ರೀ ಮಠ
ಕಿರಿಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳವರುಗಳು ಉಪಸ್ಥಿತರಿರುತ್ತಾರೆ.



ಸಮಾರಂಭದ ಅಧ್ಯಕ್ಷರಾದ ರಾಜ್ಯದ ಕೃಷಿ ಮತ್ತು ತೋಟಗಾರಿಕೆ ಸಚಿವರಾದ
ಶ್ರೀ ಹೆಚ್. ಪುಟ್ಟಸ್ವಾಮಿ ಗೌಡರು ಶ್ರೀ ಶ್ರೀ ಗಳವರ ಮಾನವೀಯ ಸೇವೆ ನಾಡಿಗೆ
ಸಲ್ಲುತ್ತಿರುವುದು ಪುಣ್ಯ ಎಂದು ಶ್ಲಾಘಿಸಿ ಸಭೆಯನ್ನುದ್ದೇಶಿಸಿ ಮಾತನಾಡುತ್ತಿರುವುದು

# ಸಿದ್ಧಗಂಗಾ

ಸಂಪುಟ–27. ಸಂಚಿಕೆ–6. ಜೂನ್ – 1991.

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ.

" ಕೈ ಗಡಗಕಾಂಬುದಕೆ ಕನ್ನಡಿಯ ಹಂಗೇಕೆ "
ಅನ್ಯರ ನೆರವೇಕೆ ದರುಶನಕೆ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

" ತಾಯಿ ಬಳ್ಳಿಗೆ ಕಾಯಿದಿಮ್ಮಿತ್ತೆ " ಎಲೆ ತಂದೆ
ಸಹಸ್ರ ಸಹಸ್ರ ಮಕ್ಕಳು ಹೊರೆಯೆ ನಿನಗೆ । ಗುರುವೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಅನುಭಾವದರವಟಿಗೆ ತೆರೆದ ಮಂಗಳ ಮೂರ್ತಿ
ತನಿಬೆಳಗ ಚೆಲ್ಲಿದ ಶಿವರೂಪ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

—ಹೆಚ್. ವಿ. ವೀರಭದ್ರಯ್ಯ.

# ಶ್ರೀವಾಣಿ

## ಪ್ರಸಾದದ ಮಹತ್ವ

ಭೀಷ್ಮರು ಶರಮಂಚದಮೇಲೆ ಮಲಗಿದ್ದಾರೆ. ಕುರುಕ್ಷೇತ್ರ ಯುದ್ಧದಲ್ಲಿ ಪಾಂಡವರು ವಿಜಯ ಸಂಪಾದಿಸಿಯಾಗಿದೆ. ಧರ್ಮರಾಜ ತನ್ನ ಸಹೋದರರೊಂದಿಗೆ ಹಾಗೂ ಧರ್ಮಪತ್ನಿ ದ್ರೌಪದಿಯೊಂದಿಗೆ ಭೀಷ್ಮರ ದರ್ಶನಕ್ಕೆ ಬರುತ್ತಾನೆ. ಭೀಷ್ಮರಿಗೆ ನಮಸ್ಕರಿಸಿ ತಮಗೆ ಆಶೀರ್ವಚನ ಬೇಡುತ್ತ ಧರ್ಮೋಪದೇಶ ಅಪೇಕ್ಷಿಸುತ್ತಾನೆ. ದ್ರೌಪದಿ ನಕ್ಕುಬಿಡುತ್ತಾಳೆ. ಧರ್ಮರಾಯನಿಗೆ ಮತ್ತುಳಿದವರಿಗೆ ವಿಪರೀತ ಕೋಪ ಬರುತ್ತದೆ. ಕುರುವೃದ್ಧ ಪೂಜ್ಯ ಭೀಷ್ಮರ ಬಗ್ಗೆ ಅಗೌರವದಿಂದ ನಡೆದುಕೊಂಡದ್ದಕ್ಕಾಗಿ ದ್ರೌಪದಿಯನ್ನು ಪ್ರಶ್ನಿಸುತ್ತಾನೆ. ನಕ್ಕದ್ದು ಏಕೆ? ಎಂದು. ಆದಕ್ಕೆ ದ್ರೌಪದಿ ಉತ್ತರಿಸುತ್ತಾಳೆ-ಹಿಂದೆ ರಾಜ ಸಭೆಯಲ್ಲಿ ತನ್ನ ವಸ್ತ್ರಾಪಹರಣ ನಡೆದಾಗ ಅಲ್ಲಿಯೇ ಕುಳಿತಿದ್ದ ಈ ವಯೋವೃದ್ಧರು ಮಾಡಿದ್ದಾದರೂ ಏನು? ಓರ್ವ ಹೆಣ್ಣಿನ ಮರ್ಯಾದೆ ಹರಣವಾಗುತ್ತಿರುವುದನ್ನು ಕಂಡು ನಿಷ್ಕ್ರಿಯರಾಗಿ ಕುಳಿತ್ತಿದ್ದವರು ಧರ್ಮದ ಉಪದೇಶ ಮಾಡಲು ಎಷ್ಟರಮಟ್ಟಿಗೆ ಅರ್ಹರಾದಾರು? ಎಂಬುದೇ ನನ್ನ ವಿಚಾರ. ಅದಕ್ಕಾಗಿಯೇ ನಕ್ಕದ್ದು ಎಂದು ದಿಟ್ಟವಾಗಿಯೇ ಉತ್ತರ ಕೊಡುತ್ತಾಳೆ. ಎಲ್ಲರೂ ಅವಾಕ್ಕಾಗುತ್ತಾರೆ. ದ್ರೌಪದಿಯ ಮಾತು ಸರಿಯಾಗಿದೆಯಲ್ಲ ಎಂದೂ ಅನ್ನಿಸುತ್ತದೆ. ಭೀಷ್ಮರೂ ಕೇಳಿಸಿಕೊಳ್ಳುತ್ತಾರೆ. ಅವರೇನೂ ಸಿಟ್ಟಾಗುವುದಿಲ್ಲ. ಭೂಮಿ ತೂಕದ ವ್ಯಕ್ತಿತ್ವ ಅವರದು. ಧರ್ಮ ಸೂಕ್ಷ್ಮವನ್ನು ಬಲ್ಲ ಪ್ರಾಜ್ಞರು ಬೇರೆ. ದ್ರೌಪದಿಯನ್ನು ಮುಂದಕ್ಕೆ ಬರುವಂತೆ ಕರೆಯುತ್ತಾರೆ. 'ಬಾ ತಾಯಿ, ನಿನ್ನ ಮಾತುಗಳಿಂದ ನನಗೇನೂ ಕೋಪವಿಲ್ಲ ನಿಜವನ್ನೇ ನುಡಿದಿದ್ದೀಯೆ ನೀನು ನಿನ್ನ ನೋವು ಏನು? ಎಷ್ಟೊಂದು ಗಂಭೀರ ಎಂಬುದನ್ನು ಬಲ್ಲೆ. ಅಂದು ನಿನ್ನ ವಸ್ತ್ರಾಪಹರಣವಾಗುವಾಗ ನಾನು ಪರಾನ್ನ ಜೀವಿಯಾಗಿದ್ದೆ. ಕೌರವನ ಅನ್ನ ಸಂಬಂಧಿಯಾಗಿದ್ದೆ. ಆದರೆ ಇಂದು ಆ ಸಂಬಂಧದಿಂದ ಮುಕ್ತನಾಗಿದ್ದೇನೆ. ಸ್ವತಂತ್ರನಾಗಿದ್ದೇನೆ. ತಾಯಿ ಯಾರ ಸಂಬಂಧವಾದ ಆಹಾರವನ್ನು ನಾವು ಸ್ವೀಕರಿಸುತ್ತೇವೆಯೋ ಆ ಸಂಬಂಧವಾದ ಬುದ್ಧಿ ಭಾವಗಳು ನಮ್ಮಲ್ಲಿ ಉಂಟಾಗುತ್ತವೆ. ಅಂದು ಧರ್ಮದ ರಕ್ಷಣೆ ಮಾಡುವಲ್ಲಿ ನಾನು ಅಸಹಾಯಕನಾಗಿದ್ದೆ. ಇಂದು ಹಾಗಲ್ಲ. ಸ್ವತಂತ್ರನಾಗಿದ್ದೇನೆ. ಧರ್ಮೋಪದೇಶ ಮಾಡುವ ನೈತಿಕ ಜವಾಬ್ದಾರಿಯುಳ್ಳವ-ಎಂದು ವಿವರಿಸುತ್ತಾರೆ ಭೀಷ್ಮ. ಪ್ರಸಾದದ ಮಹತ್ವ ಇದರಿಂದ ವ್ಯಕ್ತವಾಗುತ್ತದಲ್ಲವೆ? ಶರಣರು ಇಂಥ ಮಹತ್ವವನ್ನು ಮನಗಂಡೇ ಪದಾರ್ಥ ಭಾವದಿಂದ ಮುಕ್ತರಾಗಿ ಪ್ರಸಾದ ಭಾವದಿಂದ ಜೀವನವನ್ನೆಲ್ಲ ಸ್ವೀಕರಿಸಿದ್ದು. ಪದಾರ್ಥ ಭಾವ ಅಳಿಯಬೇಕಾದರೆ ನಾವು ಸ್ವೀಕರಿಸುವ ಒಂದೊಂದು ತುತ್ತೂ ಶಿವನ ಪ್ರಸಾದವೆಂಬ ಭಾವನೆ ಬಂದಾಗ ಸಾಧ್ಯ.

## ಸಿದ್ಧಗಂಗಾ ಮಾಸ ಪತ್ರಿಕೆ

ಶ್ರೀ ಸಿದ್ಧಗಂಗಾ ಮಠ-572104

ತುಮಕೂರು ಜಿಲ್ಲೆ

ಪ್ರಧಾನ ಸಂಪಾದಕರು

**ಪ್ರೊ|| ಚನ್ನಪ್ಪ ಎರೇಸೀಮೆ**

* * *

ಸಂಪಾದಕರು

**ಹೆಚ್. ವಿ. ವೀರಭದ್ರಯ್ಯ**

* * *

ಸಹ ಸಂಪಾದಕರು

**ಬಿ. ವೀರಭದ್ರಯ್ಯ**

**ಪಿ. ಎಸ್. ಚಂದ್ರಶೇಖರಯ್ಯ**

* * *

ಜಾಹೀರಾತು ವಿಭಾಗ

**ಎಂ. ರೇಣುಕಾರಾಧ್ಯ**

* * *

ವಿತರಣೆ ವಿಭಾಗ

**ಆರ್. ಎಸ್. ಮಲ್ಲೇಶಪ್ಪ**

* * *

ಪ್ರಕಾಶಕರು

**ಹೆಚ್. ಬಿ. ಗಂಗಾಧರಯ್ಯ**

ಹಳೆಯ ವಿದ್ಯಾರ್ಥಿ ಸಂಘದ ಪರವಾಗಿ

* * *

ಮುದ್ರಕರು

**ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ**

* * *

ಪ್ರಕಟಣೆಯ ಸ್ಥಳ

**ಶ್ರೀ ಸಿದ್ಧಗಂಗಾಕ್ಷೇತ್ರ**

**ಚಂದಾ ವಿವರ**

ವಾರ್ಷಿಕ ಚಂದಾ 25-00ರೂ

ಆಜೀವ ಸದಸ್ಯತ್ವ 250-00 ರೂ


## ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ಶ್ರೀ ಸಿದ್ಧಗಂಗಾ ಮಠದಿಂದ ಪ್ರಕಟವಾಗುತ್ತಿರುವ ಮಾಸ ಪತ್ರಿಕೆ. ಶ್ರೀ ಮಠದ ಹಳೆಯ ವಿದ್ಯಾರ್ಥಿ ಸಂಘದ ಹೆಮ್ಮೆಯ ಸೇವಾ ಪುರವಣಿ. ಮೇಲಾಗಿ ಶ್ರೀ ಮಠದ ಮುಖವಾಣಿ. ಪೂಜ್ಯ ಶ್ರೀ ಶ್ರೀ ಡಾ|| ಶಿವಕುಮಾರ ಮಹಾಸ್ವಾಮಿಗಳವರ ದಿವ್ಯ ಮಾರ್ಗದರ್ಶನದಲ್ಲಿ ಮುನ್ನಡೆದಿರುವ ಪತ್ರಿಕೆ. ತ್ರಿವಿಧ ದಾಸೋಹ ಸೇವಾ ತತ್ಪರತೆಯಿಂದ ಹೆಜ್ಜೆ ಹಾಕುತ್ತಿದೆ. ಈ ಧ್ಯೇಯ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಧರ್ಮ, ವಿಜ್ಞಾನ, ಶಿಕ್ಷಣ. ಇತಿಹಾಸ, ವೈಚಾರಿಕ, ಚಿಂತನ ಮುಂತಾದ ಲೇಖನಗಳನ್ನು ಸ್ವಾಗತಿಸುತ್ತದೆ ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೆಸ್ಟಾಂಪುಗಳನ್ನು ಲಗತ್ತಿಸಿರಬೇಕು. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನಗಳಿಗೆ ಸೂಕ್ತ ಸಂಭಾವನೆ ಕೊಡಲಾಗುವುದು.


**"ಸಂಪಾದಕರು"**

**'ಸಿದ್ಧಗಂಗಾ' ಕನ್ನಡ ಮಾಸಪತ್ರಿಕೆ**

ಶ್ರೀ ಸಿದ್ಧಗಂಗಾ ಕ್ಷೇತ್ರ-572104

ತುಮಕೂರು ಜಿಲ್ಲೆ.


ಇವರಿಗೆ ಕಳುಹಿಸಿಕೊಡಬೇಕಾಗಿ ಪ್ರಾರ್ಥನೆ

# ಶ್ರೀ ಸಿದ್ಧಲಿಂಗೇಶ್ವರ ವಚನ



ಕಸನೀರತರುವ ದಾಸಿಗೊಂದು ಶಿಶು ಹುಟ್ಟಿತ್ತು ನೋಡಾ.
ಶಿಶುಯೆದ್ದು ತಾಯನಪ್ಪಲು ಕಸನೀರರತು ಹೋಯಿತ್ತು
ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೇ.

ದೇಹ ಇಂದ್ರಿಯ ವ್ಯಾಪಾರ ದೊಡನೆ ಕೂಡಿವರ್ತಿಸುವ ಅವಿದ್ಯಾ ಶಕ್ತಿಗೆ ಸದ್ವಿವೇಕಸ್ವರೂಪದ ಚಿತ್ಪುತ್ರನುದಯವಾಗಿ ಆಯಾಯ ದೇಹ ಇಂದ್ರಿಯುಗಳ ಶಕ್ತಿಯನ್ನು ಅವಗ್ರಹಿಸಿದಾಗ ಮಾಯೆ ನಿರಸನ ವಾಗಿ ಚಿದ್ವಿದ್ಯಾಸ್ವರೂಪವಾದಲ್ಲಿ ದೇಹ ಇಂದ್ರಿಯ ವ್ಯಾಪಾರಗಳು ನಷ ವಾಗಿರ್ಪುವು ಎನ್ನುತ್ತದೆ ವಚನ

# ಸಂಪಾದಕೀಯ

### ಚುನಾವಣಾ ಫಲಿತಾಂಶ

ಹತ್ತನೇ ಲೋಕಸಭೆಯ ಚುನಾವಣೆ ಮುಗಿದಿದೆ, ಫಲಿತಾಂಶ ಹೊರಬಿದ್ದಿದೆ. ಭಾರತೀಯ ಮತದಾರನ ಅಂತರಂಗ ಹೇಗಿದೆ ಎಂಬುದು ಪ್ರಕಟಗೊಂಡಿದೆ. ಚುನಾವಣೆಯ ವಿಶ್ಲೇಷಣೆಗಳೂ ವಿಸ್ಮಯಗೊಳ್ಳುವಂತಹ ಫಲಿತಾಂಶ ಕಾಣಬಂದಿದೆ. ನಿಶ್ಚಿತ ಅಂದರೆ ಸರ್ಕಾರವನ್ನು ಸಂಪೂರ್ಣ ತನ್ನ ಪಕ್ಷದ ಬೆಂಬಲದಿಂದಲೇ ರೂಪಿಸಿಕೊಳ್ಳುವಂತ ಬಹುಮತವನ್ನು ಯಾವಪಕ್ಷವೂ ಪಡೆದಿಲ್ಲ. ಇನ್ನೊಂದು ಅಥವಾ ಇನ್ನಿತರ ಪಕ್ಷಗಳ ಬೆಂಬಲದಿಂದಲೇ ಸರ್ಕಾರ ಅಸ್ತಿತ್ವಕ್ಕೆ ಬರಬೇಕಾಗಿದೆ. ಅಂತೂ ಅನಿಶ್ಚಿತ ವ್ಯವಸ್ಥೆಯೇ ಮುಂದುವರಿದಂತಾಯಿತು. ಚುನಾವಣೆಗೆ ಮುಂಚೆ ಹೇಳಿಕೊಳ್ಳುತ್ತಿದ್ದ ಎಲ್ಲ ರಾಜಕೀಯ ಪ್ರಮುಖರ ಹೇಳಿಕೆಗಳೂ ಇಂದು ತಿರುವು ಮುರುವಾಗಿವೆ. ಕೆಲವು ಪ್ರಮುಖರಂತೂ ಭಾರೀ ಪರಾಭವನ್ನೇ ಕಂಡಿದ್ದಾರೆ. ಕೆಲವರ ಸೋಲಿನಿಂದ ಲೋಕಸಭೆಗೇ ನಷ್ಟವಾಗಿದೆ ಎನದೇ ವಿಧಿಯಿಲ್ಲ. ಆದರೆ ಮತದಾರನ ತೀರ್ಪನ್ನು ಒಪ್ಪದೇ ವಿಧಿಯಿಲ್ಲ. ಚಿತ್ರ ಜಗತ್ತಿನ ಕೆಲವರು ಲೋಕ ಸಭೆಯನ್ನು ಪ್ರವೇಶಿಸುತ್ತಿದ್ದಾರೆ. ಅನುಭವ ಶ್ರೀ ಮತಿಂಕೆಯುಳ್ಳವರ ಸಾಹಚರ್ಯ ಅವರಿಗೆ ಮಾರ್ಗದರ್ಶನ ಮಾಡಬೇಕಾಗಿದೆ. ಮುಂದಿನ ನಾಯಕರು ಯಾರೇ ಆಗಲಿ. ಯಾವ ಪಕ್ಷವೇ ಸರ್ಕಾರ ರಚಿಸಲು ಇನ್ನಾದರೂ ಪಕ್ಷ, ವ್ಯಕ್ತಿ ಪ್ರದೇಶ ಪ್ರಾಶಸ್ತ್ಯಕ್ಕಿಂತ ದೇಶದ ಹಿತದೃಷ್ಟಿಯನ್ನು ಗಮನದಲ್ಲಿಟ್ಟುಕೊಂಡು ಗೆದ್ದ ವ್ಯಕ್ತಿಗಳು ಸಂವಿಧಾನ್ಮಾಕವಾಗಿ ಕೆಲಸಮಾಡಬೇಕಾಗಿದೆ. ಈಗಾಗಲೇ ಹಲವಾರು ಸಮಸ್ಯೆಗಳ ಸುಳಿಯಲ್ಲಿ ದೇಶ ಅಭಿವೃದ್ಧಿಸಾಧಿಸುವಲ್ಲಿ ಕುಂಟುತ್ತಿದೆ. ಬಡತನ ನಿವಾರಣೆ, ನಿರುದ್ಯೋಗ ಸಮಸ್ಯೆ, ಜನಸಂಖ್ಯಾಸ್ಫೋಟ, ಋಣಭಾರ ಮುಂತಾದುವುಗಳಿಂದ ತತ್ತರಿಸುತ್ತಿದೆ. ಸ್ವಾರ್ಥ ಮುಕ್ತರಾಗದ ಹೊರತು ಆಯ್ಕೆಗೊಂಡಿರುವ ಜನಪ್ರನಿಧಿಗಳು ದೇಶದ ಅಭಿವೃದ್ಧಿಗೆ ದುಡಿಯಲಾರರು. ಪಕ್ಷಗಳ ಪರಸ್ಪರ ದೋಷಾರೋಪಣೆ, ದೂಷಣೆ ನಿಲ್ಲಬೇಕು. ಭ್ರಷ್ಟಾಚಾರ ಬಯಲಿಗೆಳೆಯುತ್ತೇವೆ ಎಂದು ಸಮಿತಿ, ಉಪಸಮಿತಿ, ಆಯೋಗ,ತನಿಖಾ ದಳಗಳನ್ನು ನೇಮಿಸುವುದರಲ್ಲೇ ಲೋಕ ಸಭೆಯ ಕಲಾಪಗಳು ಮುಗಿಯುವಂತಾಗಬಾರದು. ಮೂಲಭೂತ ಸಮಸ್ಯೆಗಳ ಪರಿಹಾರಕ್ಕೆ' ಮನಸ್ಸಾಕ್ಷಿ'ಯಾಗಿ ದುಡಿಯಬೇಕು. ಚುನಾವಣೆಗೆ ವೆಚ್ಚಮಾಡಿದ ಸಂಪತ್ತನ್ನು ಮರಳಿ ಪಡೆಯುವ 'ಮಹಾಮಣಿಹ'ದಲ್ಲಿ ಮಗ್ನರಾಗಬಾರದು. ಹನ್ನೊಂದನೆಯ ಲೋಕಸಭಾ ಚುನಾವಣೆ ಐದು ವರ್ಷ ತುಂಬಿದ ಮೇಲೆಯೇ ಬರುವಂತಾದರೂ ಈ ಚುನಾಯಿತರಾಗಿರುವ ಎಲ್ಲ ಸದಸ್ಯರು, ಎಲ್ಲ ಪಕ್ಷಗಳು ಸಂಯಮದಿಂದ ದೇಶಕ್ಕೆ ಉಪಕಾರ ಮಾಡುವಂತಾಗಲಿ ಎಂದು 'ಸಿದ್ಧಗಂಗಾ' ಹಾರೈಸುತ್ತದೆ.

# ಘನ ಮಹಿಮ ಗುರುದೇವ

ನೆ. ರಾ. ಶೇಷಾಚಲಂ
ಎಸ್.ಐ.ಟಿ, ತುಮಕೂರು.



ಶ್ರೀ ಉದ್ದಾನ ಶಿವಯೋಗಿ ಕರಕಮಲ ಸಂಜಾತ
ಶ್ರೀ ಶಿವಕುಮಾರ ಗುರುದೇವ ಶರಣು ಶರಣು.
ತುಂಬಿಹುದು ಗುರುಮಠವು ಪರಿಪರಿಯಜನರಿಂ
ಅಕ್ಕರೆಯಿಂ ವಿದ್ಯೆಯಿಂ ಕಲಿಯುತಿಹರ್ ವಿದ್ಯಾರ್ಥಿವೃಂದಂ.
ಸಂಸ್ಕೃತ ಆಂಗ್ಲ ಕನ್ನಡಮೆ ಮೊದಲಾಗಿ
ವೇದ ವಿದ್ಯೆಯಿಂ ಅತಿಶಯದಿ ಕಲಿಸುತಿರ್ಪರ್
ವಿದ್ಯೆಯಲಿ ಪಾಂಡಿತ್ಯ ಪಟ್ಟವಂ ಪಡೆದು
ಮೆರೆದಿಹರು ವಿದ್ಯಾ ನಿಧಿಗಳು
ಕರ್ನಾಟಕಾಂಧ್ರ ದೂರ ದೇಶಂಗಳೊಳ್
ಜಾತಿ ಮತ ಭೇದ ವಿನಿತಿಲ್ಲ ಇಲ್ಲಿ
ವಸತಿ ಭೋಜನವು ದೊರೆಯುತಿಹುದಿಲ್ಲಿ.
ಶತಮಾನದಿಂ ನಡೆದು ಬರುತಿದೆ ಘನಕಾರ್ಯಂ
ವೃದ್ಧಿಸಿದೆ ಅತಿಶಯದಿ ಶ್ರೀ ಶಿವಕುಮಾರ ದಯೆಯಿಂ

## ದಾನಿಗಳಿಗೊಂದು ಸದವಕಾಶ

### ಶ್ರೀ ಮಠದ ಸಮಸ್ತ ಭಕ್ತಾದಿಗಳಿಗಾಗಿ

* ಪ್ರತಿ ತಿಂಗಳು ಯಥಾ ಶಕ್ತಿ ನಿಮ್ಮ ಕಾಣಿಕೆ ಕಳಿಸಿರಿ.
* ಮನಿಯಾರ್ಡರು ದ್ವಾರಾ ಕಳುಹಿಸಬಹುದು.
* ಮೊದಲ ಬಾರಿ ಶ್ರೀಗಳವರಿಂದ ಪತ್ರ ಬರುತ್ತದೆ.
* ಪ್ರತಿ ತಿಂಗಳು ಶ್ರೀಗಳವರೇ ಹಣಪಡೆದು ಸಹಿಮಾಡಿದ ಕೂಪನ್ ಬರುತ್ತದೆ.
* ಯಥಾಶಕ್ತಿ ಕಾಣಿಕೆ ಕಳುಹಿಸುವುದು ಯಾರಿಗೂ ಹೊರೆಯಾಗಲಾರದು.
* ಪ್ರತಿಯೊಬ್ಬರ ಒಂದೊಂದು ಕಾಣಿಕೆಯೂ ಹಲವು ಸಹಸ್ರಗಳೇ ಆಗಿ ಶ್ರೀಗಳವರ ಪುಣ್ಯಕಾರ್ಯಕ್ಕೆ ಸಹಕಾರಿಯಾದೀತು.

### ಪ್ರತಿ ಶತ ಒಂದು ರೂ. ಯೋಜನೆ

(ಶ್ರೀ ಮಠದ ಎಲ್ಲಾ ಹಳೆಯ ವಿದ್ಯಾರ್ಥಿಗಳು ಮತ್ತು ಆ ಸಂಸ್ಥೆಗಳಲ್ಲಿ ಸೇವೆ ಸಲ್ಲಿಸುತ್ತಿರುವವರಿಗೆ)

* ನಿಮಗೆ ಪ್ರತಿ ಮಾಹೆ ನಿರ್ದಿಷ್ಟ ಆದಾಯ ಉಂಟು.
* ಅದರಲ್ಲಿ ಪ್ರತಿಶತ ಒಂದು ರೂ. (*one percent*) ಶ್ರೀ ಮಠಕ್ಕೆ ಕಳುಹಿಸಬಹುದು.
* ಒಬ್ಬೊಬ್ಬರೇ ಕಳುಹಿಸಬಹುದು ಅಥವಾ ಹಲವರು ಒಟ್ಟಾಗಿ ಕಳುಹಿಸಬಹುದು.
* ಚೆಕ್, ಡ್ರಾಫ್ಟ್ ಅಥವಾ ಎಂ.ಓ. ಕಳುಹಿಸಬಹುದು.
* ಶ್ರೀ ಶ್ರೀಗಳವರ ಹೆಸರಿಗೇ ಕಳುಹಿಸಬೇಕು.
* ಈ ನಿಧಿ ಸತ್ಪಾತ್ರಕ್ಕೆ ಸಲ್ಲುತ್ತದೆ.

ಜೀವನದಲ್ಲಿ ದಾನ ಮಾಡುವವರು ಇಷ್ಟು ಉತ್ಕೃಷ್ಟ ದಾನವನ್ನು ಮಾಡಲು ಹಿಂಜರಿಯಬಾರದು. ಇದಕ್ಕೂ ಶ್ರೇಷ್ಠ ಪಾತ್ರತ್ವ ನಿಮ್ಮ ದಾನಕ್ಕೆ ಅನ್ಯತ್ರ ದೊರೆಯದು. ಇದು ಸುಸಮಯ, ಅಪರೂಪದ ಅವಕಾಶ. ಈ ತಿಂಗಳಿನಿಂದಲೇ ಕಾರ್ಯರೂಪಕ್ಕೆ ತನ್ನಿ. ಇಂದೇ ಕಳಿಸಿರಿ. ಜ್ಞಾನ ದೀವಿಗೆಯಾಗಿ ಶ್ರೀ ಸಿದ್ಧಗಂಗಾ ಮಠ ನಾಡಿಗೆ ಬೆಳಕನ್ನು ಚೆಲ್ಲುತ್ತಿದೆ.

* ಪುಣ್ಯ ಕಾರ್ಯಕ್ಕಾಗಿ ಉದಾರ ನೆರವು ನೀಡಿರಿ.

ಇತಿ,
ಭಕ್ತ ಮಂಡಳಿ.

# ಶಿವಶರಣರ ವಚನಗಳ ಉಗಮ ಭಾಗ - 6

ಎಸ್. ಚನ್ನಬಸಪ್ಪ, ಗಮಕಿ, 543, 5 ನೇ ಅಡ್ಡರಸ್ತೆ, 8 ನೇ ಮುಖ್ಯರಸ್ತೆ, ಮಹಾಲಕ್ಷ್ಮೀ
ಲೇಔಟ್, ಬೆಂಗಳೂರು 86

ಕಲ್ಯಾಣದ ಮಹಾಮನೆಗೆ ಬಸವಣ್ಣನವರ ದರ್ಶನಕ್ಕಾಗಿ ಬರುತ್ತಿದ್ದ ಜಂಗಮರನ್ನು ಚನ್ನಬಸವಣ್ಣ ಅಪ್ಪಣ್ಣ ಮೊದಲಾದವರು ಆದರದಿಂದ ಸ್ವಾಗತಿಸಿ ಸತ್ಕರಿಸುತ್ತಿದ್ದರು. ಮಹಾಮನೆಯಲ್ಲಿ ಹಿಂದೆಯೇ ಬಂದು ಉಳಿದಿದ್ದ ಜಂಗಮನೊಬ್ಬ "ಹೊಸದಾಗಿ ಬಂದ ಜಂಗಮರ ಸೇವೆಯಲ್ಲಿ ನಮ್ಮನ್ನೆಲ್ಲಾ ಮರೆತು ಉಪೇಕ್ಷಿಸುತ್ತಿದ್ದಾರೆ ಎಂದು ಕೋಪಗೊಂಡು ಗಲಾಟೆಮಾಡುತ್ತಿದ್ದ. ಪ್ರಭುದೇವರಿಗೆ ಅದು ಕೇಳಿಸಿತು. ಪ್ರಭು ಆತನ ನಿಯಮವೇನೆಂದು ಕೇಳಿದಾಗ ಪೂಜೆಯ ನಂತರ ಲಿಂಗಕ್ಕೆ ಕೆನೆಹಾಲನ್ನು ಆರ್ಪಿಸುವನೇಮವೆಂದು ಇಂದು ಅದಕ್ಕೆ ಕೊರತೆಯಾಯಿತೆಂಬುದನ್ನು ತಿಳಿಸಿದ. ಆಗ ಪ್ರಭು "ಬಸವಣ್ಣನ ಮಹಾಮನೆಯ ಹಾಲನ್ನು ಲಿಂಗಕ್ಕೆ ತೋರಿಸಿ ಹೊಟ್ಟೆಗೆ ತುಂಬುವುದು ಪೂಜೆ ಪ್ರಸಾದ ಎಂದು ಭಾವಿಸಿದಿರೇನು ? ಲಿಂಗಕ್ಕೆ ಬೇಕಾದುದು ಹಾಲಿನ ನೇಮವಲ್ಲ ನಿಮ್ಮ ನಿಷ್ಠೆಯ ನಿಯಮ ಬೇಕು ಎನ್ನುವ ಸಂದರ್ಭದಲ್ಲಿ :–

**ವಚನ–62**

ಹಾಲನೇಮವ ಹಿಡಿದಾತ ಬೆಕ್ಕಾಗಿ ಹುಟ್ಟುವ,
ಕಡಲೆಯ ನೇಮವ ಹಿಡಿದಾತ ಕುದುರೆಯಾಗಿ ಹುಟ್ಟುವ,
ಅಗ್ಘಣಿಯ ನೇಮವ ಹಿಡಿದಾತ ಕಪ್ಪೆಯಾಗಿ ಹುಟ್ಟುವ,
ಪುಷ್ಪದ ನೇಮವ ಹಿಡಿದಾತ ತುಂಬಿಯಾಗಿ ಹುಟ್ಟುವ,
ಇವು ಷಟ್ಸ್ಥಲಕ್ಕೆ ಹೊರಗು ಭಕ್ತಿನಿಷ್ಠೆಯಿಲ್ಲದವರ ಕಂಡು ಮೆಚ್ಚ ಗುಹೇಶ್ವರ.

ಆದ್ದರಿಂದ ಭಕ್ತಿನಿಷ್ಠೆಯನೇಮಹಿಡಿಯಿರಿ. ಪ್ರಭುವಿನ ಈ ಮಾತು ಮುಗಿಯುತ್ತಿದ್ದಂತೆ ತಲೆಯನ್ನು ಮೇಲೆತ್ತದೆ ಅಲ್ಲಿಂದ ಜಾರಿದ ಜಂಗಮ

ಆಗ ಅಲ್ಲಮ ಪ್ರಭು ಮುಗುಳು ನಗುತ್ತಾ ಸುತ್ತಲೂ ಇದ್ದ ಜಂಗಮರನ್ನು ನೋಡಿ ಈ ವಚನ ಹೇಳಿದ

**ವಚನ – 63**

ಲೋಕದವರ ನೊಂದು ಭೂತ ಹಿಡಿದರೆ,
ಆ ಭೂತ ದಿಜ್ಞೆಯಲ್ಲಿ ನುಡಿವುತ್ತಿಪ್ಪರು.
ಲಾಂಛನಧಾರಿ ವೇಷವ ಧರಿಸಿ,
ಆಶೆಯಿಂದ ಘಾಸಿಯಾಗಲೇಕಯ್ಯ ?
ಆನೆಯ ಚೋಹವ ತೊಟ್ಟು ನಾಯಾಗಿ ಬೊಗಳುವ
ಮಾನವರ ನೇನೆಂಬೆ ಗುಹೇಶ್ವರಾ

ಆಗ ಬಸವಣ್ಣ ಲಾಂಛನವ ಕಂಡು ನಂಬುವೆ, ಶಿವಭಕ್ತರಾದ ಕಾರಣ, " ಜಂಗಮರೇ ಲಿಂಗ" ಎಂದು ಮನಸ್ಸು ನಂಬುತ್ತದೆ- ಎಂದಾಗ ಸಿಕ್ಕ ಸಿಕ್ಕವರಿಗೆ ದೀಕ್ಷೆ ಕೊಡಬಾರದು ಆದ್ದರಿಂದಲೇ ಅವರಲ್ಲಿ ದೌರ್ಬಲ್ಯಗಳು ಕಾಣಿಸಿಕೊಳ್ಳುತ್ತವೆ - ಎಂದು ಹೇಳಿ ನೀನೇ ಹೇಳಿರುವ ಮಾತುಗಳು ನೆನಪಿಗೆ ಬರುತ್ತಿವೆ ಬಸವಣ್ಣ – ನಿನ್ನದೆ ವಚನ : 64

ಕುಂಬಳ ಕಾಯಿಗೆ ಕಬ್ಬಿನದ ಕಟ್ಟಕೊಟ್ಟರೆ
ಕೊಳೆವುದಲ್ಲದೆ ಬಲುಹಾಗ ಬಲ್ಲದೆ?
ಅಳಿಮನದವಂಗೆ ಶಿವದೀಕ್ಷೆಯ ಕೊಟ್ಟರೆ
ಭಕ್ತಿ ಎಂತಹುದೋಮುನ್ನಿನಂತೆ?
ಕೂಡಲ ಸಂಗಯ್ಯಾ ಮನ ಸನ ಹೀಮೀಸಲ ಕಾಯ್ದಿರಿಸಿದಂತೆ -

ಹೀಗೆಂದು ಹೇಳಿದ್ದೀಯ ಅಲ್ಲದೆ ಹೇಳಿರುವೆ: ವಚನ – 65

ಸಗಣಿಯ ಬೆನಕಂಗೆ ಸಂಪಿಗೆಯರಳಲ್ಲಿ ಪೂಜಿಸಿದರೆ
ರಂಜನೆಯಲ್ಲದೆ ಅದರ ಗಂಜಳ ಬಿಡದಣ್ಣಾ !
ಮಣ್ಣ ಪುತ್ಥಳಿಯ ಮಾಣದೆ ಜಲದಲ್ಲಿ ತೊಳೆದರೆ ನಿಚ್ಚ ನಿಚ್ಚಕ್ಕೆ
ಕೆಸರಹುದಲ್ಲದೆ ಅದರಚ್ಚುಗ ಬಿಡದಣ್ಣಾ !
ಲೋಕದ ಮಾನವಂಗೆ ಶಿವದೀಕ್ಷೆಯ ಕೊಟ್ಟರೆ
ಕೆಟ್ಟವನೇಕೆ ಶಿವಭಕ್ತನಹನು ಕೂಡಲ ಸಂಗಮ ದೇವಾ ?

ಎನ್ನುತ್ತಾ ಕೆಟ್ಟವನೇಕೆ ಶಿವಭಕ್ತನಹನು ? ಎಂಬುದನ್ನು ಜ್ಞಾಪಿಸಿಕೋ ಎಂದರು.

ಪ್ರಭುದೇವರು ಒಮ್ಮೆ ಬಸವಣ್ಣನವರನ್ನು ಕುರಿತು ನೀನು " ಜಗತ್ ಸಂಸಾರವನ್ನು ಕಟ್ಟಿಕೊಂಡಿದ್ದೀಯ, ಆದರ ಯಜಮಾನನಾಗಿ ಆ ಹೊರೆಯನ್ನು ಹೊರಲೇಬೇಕು ಎಂದಾಗ " ನಾನು ಯಜಮಾನನಲ್ಲ ಪ್ರಭುವೇ ತೊತ್ತು ಕೆಲಸವ ಮಾಡುವವನು, " ಎಂದಾಗ ನಿನ್ನ ವಚನಬಂದನ್ನು ನೋಡಿ ನಾನು ಮನ ಸೋತೆ ಎಂದು ಹೇಳುತ್ತ ಈ ವಚನವನ್ನು ಹೇಳತೊಡಗಿದ : ವಚನ–66

ಕೈಯೆ ಬೊಹರಿಗೆ, ಮಂಡೆಯ ಮೇಲೆ ಸಿಂಬಿ,
ಸಿಂಬಕನ ಮನೆಯ ಮಗ ನಾನಯ್ಯಾ
ಕೂಡಲ ಸಂಗಮದೇವಯ್ಯ,
ಮಂಚದ ಕೋಡೇರಿ ಬಂದ ತೊತ್ತಿನ ಮಗ ನಾನಯ್ಯಾ ಎಂದಿರುವೆ.

ಆದ್ದರಿಂದ ಜಗತ್ತಿನ ಕೊಳೆಯನ್ನು ಹೊತ್ತುಹಾಕುವ ಜಗದ ಜಲಗಾರ ಎಂದು ಹೊಗಳಿದ ಪ್ರಭುದೇವ.

ನಂತರ ಸಕಲೇಶ ಮಾದರಸ ಹೇಳಿದ ಒಮ್ಮೆ ಒಂದು ರಾತ್ರಿ ಮಹಾಮನೆಗೆ ಕಳ್ಳರು ಬಂದು ಹಸುಗಳನ್ನು ಕದ್ದು ಹೊಡೆದುಕ್ಕೊಂಡು ಹೋದಾಗ-ಕರುಗಳು ಏನಾದವು ಅಪ್ಪಣ್ಣ ಹಾಲುಣ್ಣುವ ಕರುಗಳ ತಬ್ಬಲಿಯಾದುವೆಲ್ಲಾ ಎಂದು ಈ ವಚನವನ್ನು ನುಡಿದ :

ವಚನ.68

ಆ ಕಳ ಕಳ್ಳರು ಕೊಂಡೊಯ್ಯರೆನ್ನದಿರಿಂಭೋ, ನಿನ್ನ ಧರ್ಮ ।
ಬೊಬ್ಬಿಡದಿರಿಂಭೋ ನಿಮ್ಮ ಧರ್ಮ ।
ಅರಿಡದಿರಿಂಭೋ ನಿಮ್ಮ ಧರ್ಮ ।
ಅಲ್ಲಿ-ಉಂಬರೆ ಸಂಗ ಇಲ್ಲಿ ಉಂಬರೆಸಂಗ॥
ಕೂಡಲ ಸಂಗಮದೇವಾ ಏಲೋಭಾವ! ಎಂಬ ವಚನ ಹಾಡಿದುದನ್ನು ಪ್ರಭುವಿಗೆ ಹೇಳಿ ಅದನ್ನು ಕದ್ದವರು ಉತ್ತಮರೇ ಹೊಟ್ಟೆಗಿಚ್ಚಿಗಾಗಿ ಎಂದು ಹೇಳಿ ಆಗ ಆ ಕರುಗಳನ್ನು ಅವುಗಳ ತಾಯಿಯ ಬಳಿಗೆ ಹೊಡೆಸಿದರು ಎಂದು ಪ್ರಭುವಿಗೆ ತಿಳಿಸಿದರು. ಅಲ್ಲದೆ ಹೇಳಿದರು ಹೆಚ್ಚಾಗಿ ಕಟ್ಟಿಕೊಂಡಿರೀವವ ನಾನೇ ಕಳ್ಳ ಎಂದು ಅಲ್ಲದೆ ಹಿಂದೊಮ್ಮೆ ತಾಯಿಯವರ ಓಲೆಗಳಿಗೆ ಕಳ್ಳ ಕೈ ಹಾಕಿದಾಗ ಕಳ್ಳನಮನೆಗೊಬ್ಬ ಬಲುಗಳ್ಳ ಬಂದರೆ ಕೂಡಲ ಸಂಗಮನಲ್ಲದೆ ಬೇರಾರೂ ಅಲ್ಲ ; ಎಂದರು ಎಂಬ ಪ್ರಸಂಗವನ್ನು ಅಪ್ಪಣ್ಣ ಹೇಳಿದ.

ಒಮ್ಮೆ ಶರಣರ ಗೋಷ್ಟಿಯಲ್ಲಿ ಬಸವಣ್ಣ ಇಷ್ಟಲಿಂಗದ ಮಹಿಮೆಯನ್ನು ತಿಳಿಸುತ್ತಾ ಇಷ್ಟಲಿಂಗ ಧಾರ್ಮಿಕ, ಸಾಮಾಜಿಕ ಸಮತೆಯ ಎಲ್ಲಾ ಹಂತಗಳಲ್ಲಿಯೂ ಸಾಕಾರ ನಿರಾಕಾರಗಳೆರಡರ ಶಕ್ತಿಯುತವಾದ ಸಂಕೇತವಾಗಿ ಅದು ರೂಪುಗೊಂಡು ನಮ್ಮ ಕರಸ್ಥಳಕ್ಕೆ ಬಂದಿದೆ ಎಂದು ಹೇಳಿ ಈ ವಚನವನ್ನು ಹಾಡಿದ. **ವಚನ-68**

ಜಗದಗಲ ಮುಗಿಲಗಲ ಮಿಗೆಯಗಲ ನಿಮ್ಮಗಲ ;
ಪಾತಾಳದಿಂದತ್ತತ್ತ ನಿಮ್ಮ ಶ್ರೀ ಚರಣ,
ಬ್ರಹ್ಮಾಂಡ ದಿಂದತ್ತತ್ತ ನಿಮ್ಮ ಶ್ರೀ ಮಕುಟ ।
ಅಗಮ್ಯ ಅಗೋಚರ ಅಪ್ರತಿಮ ಲಿಂಗವೇ
ಕೂಡಲ ಸಂಗಮ ದೇವಯ್ಯಾ ಎನ್ನ ಕರಸ್ಥಳಕ್ಕೆ ಬಂದು ಚುಳುಕಾದಿರಯ್ಯಾ

ಒಮ್ಮೆ ಅಸೂಯಾ ಪರರಾದ ಅಪ್ಪಣ್ಣ ದೀಕ್ಷಿತ ಮತ್ತು ಕೃಷ್ಣರಸ ಬಿಜ್ಜಳನ ಆಸ್ಥಾನದಲ್ಲಿ ಚಾಡಿ ಹೇಳತೊಡಗಿದರು' "ಶರಣರು ಜಂಗಮರು ಎಂಬ ಹೆಸರಿನಿಂದ ಎಷ್ಟು ಜನ ವೇಷಧಾರಿಗಳಿಗೆ ಕೀಳರಿಗೆ ಕೊಳಕರಿಗೆ ಅಸಂಸ್ಕೃತರಿಗೆ, ಪುಂಡರಿಗೆ ಪೋಕರಿಗಳಿಗೆ ಅನ್ನಹಾಕುತ್ತಿದ್ದೀರಿ ಎಂದು ಮಹಾಸ್ವಾಮಿಗಳು ಕೇಳುತ್ತಿದ್ದಾರೆ ಒಂದೇ ಮಾತಿನಲ್ಲಿ ತನ್ನ ಮನಸ್ಸಿನ ವಿಷವನ್ನೆಲ್ಲಾ ಹೊರಹಾಕಿದ ಕೃಷ್ಣರಸ ಆಗ ಬಸವಣ್ಣ ಬಹಳ ಎತ್ತರದಲ್ಲಿದ್ದೇವೆಂದು ನೀವುತಿಳಿದ್ದೀರಿ ಆದರೆ ಸತ್ಯದ ನಿಲವನ್ನು ಅರಿಯದೆ ಹೋಗಿದ್ದೀರಿ ಎಂದು ಈ ವಚನವನ್ನು ಹೇಳಿದರು. **ವಚನ-69**

ಆನೆಯ ನೇರಿಕೊಂಡು ಹೋದಿರೆ ನೀವು
ಕುದುರೆಯ ನೇರಿಕೊಂಡು ಹೋದಿರೆ ನೀವು,
ಕುಂಕುಮ ಕಸ್ತೂರಿಯ ಪೂಸಿಕೊಂಡು ಹೋದಿರೆ ಅಣ್ಣಾ ।
ಸತ್ಯದ ನಿಲವನರಿಯದೆ ಹೋದಿರಲ್ಲಾ ।

ಸದ್ಗುಣವೆಂಬ ಫಲವ ಬಿತ್ತಿ ಬೆಳೆಯದೆ ಹೋದಿರಲ್ಲಾ

ಅಹಂಕಾರವೆಂಬಸದ ಮದಗಜವೇರಿ ವಿಧಿಗೆ ಗುರಿಯಾಗಿ ನೀವು ಹೋದಿರಲ್ಲಾ

ನಮ್ಮ ಕೂಡಲ ಸಂಗಮ ದೇವರನರಿಯದೆ ನರಕಕ್ಕೆ ಭಾಜನವಾದಿರಲ್ಲಾ !

ಎಂದಾಗ ಮಂಚಣ್ಣ ಈ ಮಾತಿನ ಮೋಡಿ ಹಾಕಬೇಡಿ ಎಂದಾಗ ಮೋಡಿ ಹಾಕುವ ಹಾವಾಡಿಗ ನಾನಲ್ಲ, ಶರಣರನ್ನು ನೀವು ತಿರಸ್ಕರಿಸುತ್ತಿದ್ದೀರಿ, ಪರಿಹಾಸ್ಯ ಮಾಡುತ್ತಿದ್ದೀರಿ "ಹಾವಿನ ಹೆಡೆಗಳ ಕೊಂಡು ಕೆನ್ನೆಯ ತುರಿಸುವಂತೆ ನಿಮ್ಮಪಾಡಿಗೆನೀವು ಸುಮ್ಮನಿರಿ ಎಂದು ಮಾತ್ರ ಹೇಳುತ್ತಿದ್ದೇನೆ ಎಂದು ಹೇಳಿ ಈವಚನವನ್ನು ನುಡಿದರು.

**ವಚನ – 70**

ಕೋಣನ ಹೇರಿಂಗೆ ಕುನ್ನಿ ಬುಸುಗುಡುತ್ತ ಬಡೆವಂತೆ

ತಾವು ನಂಬರು ನಂಬುವವರ ನಂಬಲೀಯರು ;
ತಾವು ಮಾಡರು. ಮಾಡುವವರ ಮಾಡಲೀಯರು ;
ಮಾಡುವ ಭಕ್ತರ ಕಂಡು ಸೈರಿಸಲಾರದವರ

ಕೂಗಿಡೆ ಕೂಗಿಡೆ ನರಕದಲ್ಲಿಕ್ಕುವ ಕೂಡಲ ಸಂಗಮದೇವಾ !

ದಾಸೋಹಕ್ಕೆ ರಾಜ್ಯದ ಬೊಕ್ಕಸದ ಹಣ ಉಪಯೋಗಿಸುವನೆಂದು ತಿಳಿದು ಅಸೂಯೆಯಿಂದ ಕೂಡಿದ ಜನಕ್ಕೆ ಹೇಳಿದ ಮಾತು ಬಸವಣ್ಣನವರು.

ಭವಿಯಾದ ಬಿಜ್ಜಳನ ಕೈಕೆಳಗೆ ಕೆಲಸ ಮಾಡುತ್ತಿರುವ ಬಸವಣ್ಣನನ್ನು ತಾವು ಮಾಡುತ್ತಿರುವುದು ತಪ್ಪೆಂದು ಹೇಳತೊಡಗಿದಾಗ – ಜನತೆಯ ಸೇವೆಗೆ ಇದೊಂದು ಅವಕಾಶ ಎಂದು ಮಾಡುತ್ತಿದ್ದೇನೆ ಅದು ಸಾಧ್ಯವಿಲ್ಲವೆಂದು ಕಂಡುಬಂದ ದಿನ ಅದನ್ನು ಬಿಟ್ಟು ಹೊರಬರುತ್ತೇನೆ ಎಂಬುದಾಗಿ ಹೇಳಿ; **ವಚನ – 71**

ಹೊತ್ತಾರೆ ಎದ್ದು ಕಣ್ಣ ಹೊಸೆವುತ್ತಾ ಎನ್ನೊಡಲಿಂಗೆ ಎನ್ನೊಡವೆಗೆ,

ಎನ್ನ ಮಡದಿ ಮಕ್ಕಳಿಗೆಂದು ಕುದಿದೆನಾದರೆ ಎನ್ನ ಮನಕ್ಕೆ ಮನವೇ ಸಾಕ್ಷಿ ಎಂದು ನಾನು ಹಿಂದೆಯೇ ಹೇಳಿದ್ದೇನೆ.

" ನಿಮ್ಮ ನಿಲವಿಂಗೆ ಕುದಿವೆನಲ್ಲದೆ ಎನ್ನೊಡಲವಸರಕ್ಕೆ

ಕುದಿದೆನಾದೊಡೆ ತಲೆದಂಡಾ ಕೂಡಲ ಸಂಗಮ ದೇವ ಎಂಬುದು ನನ್ನ ಭಾಷೆ

ಎಂದು ಬಸವಣ್ಣ ವಿವರಿಸಿದರು.

# ಸರ್ವೋದಯದ ಸಿದ್ಧಾಂತ - ಸಿದ್ಧಿ

ಶ್ರೀ ತದ್ದಲಸೆ ವಿಘ್ನೇಶ್ವರ ಶರ್ಮಾ, ಅಂಚೆ : ಹುಣ್ಸೇಕೊಪ್ಪ, ಶಿರಸಿ. (ಉತ್ತರ ಕನ್ನಡ)

"ಸರ್ವೇಜನಾ : ಸುಖಿನೋ ಭವಂತು" ಎನ್ನುವುದೇ ಸರ್ವೋದಯದ ಅಂತರಾತ್ಮ. ಸರ್ವರೂ ಸುಖಿಗಳಾಗಿ ಬಾಳುವುದು, ತಮ್ಮ ತಮ್ಮ ಉದ್ಯೋಗಗಳನ್ನು ಪ್ರಾಮಾಣಿಕವಾಗಿ ನಿರ್ವಹಿಸಿ, ಜ್ಯೇಷ್ಠ - ಕನಿಷ್ಠ ಎಂಬ ಭಾವನೆ ಅಳಿದು ಎಲ್ಲರೂ ಸಮಾನರು, ಸಹೋದರರು ಎಂಬ ವಿಚಾರ ಅರಳಿಸಿ ಆತ್ಮ ಗೌರವದಿಂದ ಬಾಳುವುದೇ ಸರ್ವೋದಯದ ಮೂಲ ಸಿದ್ಧಾಂತವಾಗಿದೆ. ಆದರ ಸೆರೆಯಲ್ಲಿ ಅಲೆಯಲ್ಲಿ ಸೇರತಕ್ಕವರಲ್ಲ "ಸಹಬಾಳು - ಸಮಪಾಲು" ಎಂಬ ತತ್ವವನ್ನು ಒಪ್ಪಿಕೊಳ್ಳಬೇಕಾಗುತ್ತದೆ. ನಮ್ಮ ಉಪನಿಷತ್ತಿನಲ್ಲಿ ಹೇಳಿದಹಾಗೆ "ಸಮಾನಾ ಹೃದಯಾನಿವ :, ಸಮಾನಮಸ್ತುವೊ ಮನ :" ಅಂದರೆ ಮಾನವ ಜನಾಂಗವೆಲ್ಲ ಒಂದು, ಎಲ್ಲರ ಹೃದಯ ಮನಸ್ಸುಗಳೆಲ್ಲ ಒಂದೇ ತೆರನಾದದ್ದು ಆಗಬೇಕೆಂಬುದೇ ಅದರ ಅಭಿಪ್ರಾಯ.

ಸರ್ವೋದಯ ಎಂಬ ಶಬ್ದದಲ್ಲಿಯೇ ಅದರ ತತ್ವಾದರ್ಶಗಳಿವೆ. ಕೇವಲ ಆರ್ಥಿಕ ಹಾಗೂ ಸಾಮಾಜಿಕ ಸಮಾನತೆಗಳನ್ನಷ್ಟೇ ಸಾಧಿಸುವುದು ಇದರ ದೃಷ್ಟಿಯಲ್ಲ. ಬಾಳಿನ ಸಮಗ್ರ ಅಭ್ಯುದಯದ ಗುರಿಯ ಜೊತೆಗೆ ಅಧ್ಯಾತ್ಮಿಕ ಮುನ್ನಡೆಯ ವರೆಗಿನ ಎಲ್ಲ ಅಂಶಗಳೂ ಸಂಗತಿಗಳೂ ಈ ಸರ್ವೋದಯದಲ್ಲಿ ಸೇರಿಕೊಳ್ಳುತ್ತವೆ. ಸಮಾಜದ ಕಟ್ಟಕಡೆಯ ವ್ಯಕ್ತಿಯನ್ನು ಗುರುತಿಸಿ ಅವನಿಗೂ ಪ್ರಪ್ರಥಮ ಆವಶ್ಯಕತೆಯನ್ನು ತಿಳಿಯುವ ಪೂರೈಸುವ ವಿಶಿಷ್ಟ ಸಂಸ್ಕೃತಿ ಈ ಸರ್ವೋದಯದ್ದಾಗಿದೆ. ಸಮಾಜವೇ ಒಂದು ದೇವರು, ಇದರ ಆರಾಧನೆಯಲ್ಲಿ ಎಲ್ಲರೂ ಸಮಾನರು. ಉಚ್ಚ - ನೀಚ ತಾರತಮ್ಯತೆಗೆ ಇಲ್ಲಿ ಅಸ್ಪದವೇ ಇಲ್ಲ. ಭಂಗಿಯ ಕೆಲಸ ಮಾಡತಕ್ಕವನೂ ದೇವರ ಪೂಜೆ ಮಾಡತಕ್ಕವನೂ ಅವರವರ ಸಮರ್ಪಕ ಕಾರ್ಯ ನಿರ್ವಹಣೆಯಿಂದ ಸಮಾನರು ಎಲ್ಲವೂ ಸಮಾಜ ಸೇವೆ, ಈಶ ಸೇವೆ ಎಂಬ ಭಾವನೆಯೇ ಇಲ್ಲಿ ಮುಖ್ಯಧರ್ಮ. ಸಮಾಜದ ಎಲ್ಲ ವರ್ಗದ ಜನರನ್ನು ಒಂದೇ ಸೂತ್ರದಲ್ಲಿ ಒಂದಾಗಿಸುವುದೇ ಸರ್ವೋದಯದ ದೊಡ್ಡ ಆದರ್ಶವಾಗಿದೆ. ಜೀವನದ ವ್ಯವಹಾರ ವ್ಯವಸ್ಥೆಗಳನ್ನು ವೃತ್ತಿ ಪ್ರವೃತ್ತಿಗಳನ್ನು, ಆಸೆ - ಆಕಾಂಕ್ಷೆಗಳನ್ನು ವಿಭಾಗಿಸಿ ಅದು ನೋಡುವುದಿಲ್ಲ. ಅವೆಲ್ಲವನ್ನೂ ಏಕೀಕರಿಸಿ ಬದುಕಿನ ಮೌಲ್ಯಗಳನ್ನು ಅಳವಡಿಸಿ ವಿಶಾಲ ತಳಹದಿಯ ಮೇಲೆ ಈ ಸರ್ವೋದಯ ಸಿದ್ಧಾಂತ ಬೆಳೆ...ದಿದ್ದಾಗಿದೆ. ವಿಕಾಸಶೀಲ ಜೀವನಚಕ್ರವನ್ನು ರೂಪಿಸುವುದೇ ಅದರ ಮುಖ್ಯ ಗುರಿಯಾಗಿದೆ.

## ಮೂಲಭೂತ ಸಿದ್ಧಾಂತ :

ಸರ್ವೋದಯದಲ್ಲಿ ಮೂಲಭೂತವಾದ ಮೂರು ಸಿದ್ಧಾಂತಗಳು ಅತ್ಯಂತ ಮಹತ್ವದವುಗಳಾಗಿವೆ. ಆಹಾರ-ಆಶ್ರಯ-ಆಚ್ಛಾದನ. ಇವುಗಳನ್ನು ಪ್ರತಿಯೊಬ್ಬನಿಗೂ

ಅವಶ್ಯಕತೆಯಿರುವಷ್ಟು ಒದಗಿಸದಿದ್ದರೆ ವಿಕಾಸಶೀಲ ಸಮಾಜದ ನಿರ್ಮಾಣವೇ ಆಗುವುದಿಲ್ಲ. ಪ್ರತಿಯೊಬ್ಬ ವ್ಯಕ್ತಿಗೂ ಇವು ದೊರೆಯಬೇಕಾದ್ದು ಅಗತ್ಯ. ಕೆಲವರಿಗೇ ಇವು ಅತಿಯಾಗಿ ದೊರೆತು ಉಳಿದವರಿಗೆ ಅವರ ಪರಿಮಿತಿಯಷ್ಟೂ ದೊರೆಯದಿದ್ದರೆ ಸರ್ವೋದಯಕ್ಕೆ ಅರ್ಥವೇ ಇಲ್ಲದಂತಾಗುತ್ತದೆ. ನಿರಂತರ ಶೋಷಣೆ ನಡೆಸಿ ಅತಿಯಾದ ಸಂಪತ್ತು ಒಂದೆಡೆಗೆ ಸೇರುವುದರಿಂದ ಅನ್ಯರ ಬದುಕನ್ನು, ಅಸ್ತಿತ್ವವನ್ನು ಅಲಕ್ಷಿಸಿದಂತಾಗುತ್ತದೆ. ಅದರ ಕನಿಷ್ಠ ಅವಶ್ಯಕತೆಗಳೂ ಪೂರೈಸದಿದ್ದರೆ ಸಾಮಾಜಿಕ ಸುಸ್ಥಿತಿ ಹೇಗೆ ಬೆಳೆದೀತು ? ವ್ಯಕ್ತಿ – ವ್ಯಕ್ತಿಗಳಲ್ಲಿ ಮೈತ್ರಿ – ಮಧುರಭಾವ ಹೇಗೆ ಬಂದೀತು ?

ಭೋಗ ಜೀವನವನ್ನು ಸಂಪೂರ್ಣ ನಿರಾಕರಿಸುವುದೇ ಸರ್ವೋದಯದ ಒಂದು ಅಂಗವಾಗಿದೆ. ತನಗೆ ಅವಶ್ಯಕವೆನ್ನಿಸುವಷ್ಟು ಮಾತ್ರ ಪಡೆಯಬೇಕು, ಅದೂ ಸಹ ಅನ್ಯರಿಗೆ ಶೋಷಣೆ ಆಗದಂತೆಯೂ ನೋಡಬೇಕು. ಸಂಪತ್ತನ್ನು ಕೂಡಿಸುವಾಗ ಪ್ರಾಮಾಣಿಕತೆ ಹಾಗೂ ಅದು ತನ್ನದು ಎಂಬ ಭಾವನೆಯಿರಿಸಿಕೊಂಡು ನಂತರ ಅದರ ಬಳಕೆಯಲ್ಲಿ ತಾನೊಬ್ಬ ಅದರ ಧರ್ಮದರ್ಶಿ ಇದ್ದಂತೆ ವರ್ತಿಸಬೇಕಾದುದು ಮುಖ್ಯ ಧರ್ಮವಾಗಿದೆ. ಯಾಕೇಂದರೆ ತಾನು ಕೂಡಿಸಿದ ಸಂಪತ್ತಿನಲ್ಲಿ ಅನೇಕರ ಸಹಕಾರ-ಸಹಾನುಭೂತಿ ಸೇರಿ ಅವರ ಋಣವೂ ಕೂಡಿರುತ್ತದೆ. ನಮ್ಮ ವೃತ್ತಿಯನ್ನು ಸಮಾಜ ಮನ್ನಿಸದಿದ್ದರೆ ಈ ಸಂಪತ್ತಿನ ಶೇಖರಣೆ ಆಗುತ್ತಿರಲಿಲ್ಲ. ಹಾಗಾಗಿ ಅದು ಸಮಾಜದ ಸಹಾನುಭೂತಿಯಿಂದ ಆದದ್ದೆಂದು ತಿಳಿಯಬೇಕು. ಅಲ್ಲಿ ಸೇರುವ ಸಂಪತ್ತಿನಲ್ಲಿ ಸಮಾಜದ ಪಾಲೂ ಅಪ್ರತ್ಯಕ್ಷವಾಗಿ ಇರುತ್ತದೆ. ಅದಕ್ಕಾಗಿ ಅದರಲ್ಲಿಯ ಕೆಲವು ಅಂಶವನ್ನು ಸಾಮಾಜಿಕ ಸುಧಾರಣೆಯ ಕಾರ್ಯಕ್ಕಾಗಿಯೇ ಬಳಕೆಯಾಗುವುದು ಸರ್ವೋದಯಕ್ಕೊಂದು ಸರಿಯಾದ ನೆಲ-ಬಲ ದೊರೆತಂತಾಗುತ್ತದೆ.

**ಸರಳ ಜೀವನ :-**

ಈ ಸರ್ವೋದಯದ ಸ್ವರೂಪ ಸಿದ್ಧಾಂತವನ್ನು ದರ್ಶನ ಮಾಡಿದವರಲ್ಲಿ ಗಾಂಧೀಜಿ, ವಿನೋಬಾ, ಜಯಪ್ರಕಾಶ್ ಇವರು ಮುಖ್ಯ ವ್ಯಕ್ತಿಗಳು. ಸಾಮಾಜಿಕ ಸ್ಥಿತ್ಯಂತರಗಳನ್ನು ನಿರೀಕ್ಷಿಸಿ ದೇಶದ ಪುನರುತ್ಥಾನಕ್ಕೆ ಸರ್ವೋದಯವೊಂದೇ ತಾರಕವೆಂದು ಸಾರಿ ಹೇಳಿದವರು. ಆದರೆ ಅದು ಎಷ್ಟರ ಮಟ್ಟಿಗೆ ಕಾರ್ಯರೂಪಕ್ಕೆ ಬರಬೇಕಾಗಿತ್ತೋ ಬಂದೇ ಇಲ್ಲ. ಸ್ವಾತಂತ್ರ್ಯೋತ್ತರದಲ್ಲಿ ನವ ಸಮಾಜದ ನಿರ್ಮಾಣಕ್ಕೆ ಸರ್ವೋದಯದ ಹೊರತು ಅನ್ಯ ಸಿದ್ಧಾಂತಗಳು ಮುನ್ನಡೆ ಸಾದಿಸಲಾರವು ಎಂದೇ ಈ ದ್ರಷ್ಟಾರರ ಅಭಿಪ್ರಾಯ. ನಮ್ಮ ದೇಶದ ಪರಿಸ್ಥಿತಿಯೇ ಒಂದು ವಿಶಿಷ್ಟ ರೀತಿಯದು. ಹಲವು ಹತ್ತು ಮತ ಪಂಥಗಳು, ಉಚ್ಚ-ನೀಚ ತಾರತಮ್ಯತೆಗಳು,

ಬಡವ - ಶ್ರೀಮಂತರೆಂಬ ಭೇದಗಳು, ಅಜ್ಞಾನ - ಅನಕ್ಷರತೆ, ಜಾತಿ – ವರ್ಗಗಳ ವಿಭಿನ್ನ ಸಂಘರ್ಷಗಳಲ್ಲಿ ವಿಕಾಸಶೀಲ ಸುಖೀ ಸಮಾಜ ನಿರ್ಮಿಸುವುದು ಸಣ್ಣ ಸಂಗತಿಯಾಗಿಲ್ಲ. ಹಾಗ್ಗಾಗಿ ಈ ದೇಶಪ್ರೇಮೀ ಮಹನೀಯರು ಸರ್ವೋದಯವನ್ನು ಗುರುತಿಸಿದರು ಹಾಗೂ ಗ್ರಾಮ ಸ್ವರಾಜ್ಯಗಳ ಮೂಲಕ ರಚನಾತ್ಮಕ ಸಾಧನೆಯಿಂದ ಸರ್ವೋದಯದ ಸಿದ್ಧಿ - ಸಾಧ್ಯ ವೆಂದು ಹೇಳಿದರು.

ನಾವು ವಿಲಾಸೀ ಜೀವನಕ್ಕೆ ಕಡಿವಾಣ ಹಾಕುವುದರಿಂದ ಸರಳ ಜೀವನ ತಾನಾಗಿ ಮೂಡಿಕೊಳ್ಳುತ್ತದೆ, ಅತಿಯಾದ ಸಂಗ್ರಹ ಪ್ರವೃತ್ತಿ—ತಾನು ತನ್ನದು ಎಂಬ ಅನ-ಪೇಕ್ಷಿತ ಮಹತ್ವಾಕಾಂಕ್ಷೆ, ಇಲ್ಲಿ ನಷ್ಟವಾಗುತ್ತದೆ. ಸರ್ವೋದಯಕ್ಕೆ ಮುಖ್ಯ ಭೂಮಿಕೆಯೇ ಇದು. ಅತಿಯಾದ ಸಂಗ್ರಹ ಶೋಷಣೆ ಮಾಡಿಯಾದರೂ ಹೆಚ್ಚು ಹಣ ಸಂಪಾದಿಸುವುದು, ಇವು ಸಾಮಾಜಿಕವಾಗಿ ವಿರಸ—ವಿಷಮತೆಗೆ ದಾರಿ ಮಾಡುತ್ತದೆ. ಒಬ್ಬರಿಗೆ ಉಣುವುದಕ್ಕೇ ಇಲ್ಲದಿರುವುದು, ಇನ್ನೊಬ್ಬರು ಅಜೀರ್ಣವಾಗುವಷ್ಟು ಉಂಡು ಚೆಲ್ಲುವುದು, ಒಬ್ಬರಿಗೆ ಮೈಗೆ ಮುಚ್ಚುವಷ್ಟೂ ಬಟ್ಟೆ ಇಲ್ಲದಿರುವುದು, ಇನ್ನೊಬ್ಬರು ದುಬಾರಿ ಬಟ್ಟೆಗಳನ್ನು ಹೆಚ್ಚು ಹೆಚ್ಚು ಧರಿಸುವುದು. ಈ ರೀತಿಯ ಏರು - ಪೇರುಗಳಿಂದ ಸಾಮಾಜಿಕ ಶಾಂತಿ - ಸುವ್ಯವಸ್ಥೆಯ ಸಮತೋಲ ತಪ್ಪುವ ಭಯವಿರುತ್ತದೆ. ಈ ಅಪಾಯವನ್ನು ಗ್ರಹಿಸಿ ಸಾಮಾಜಿಕ ನ್ಯಾಯಕ್ಕೆ ಬದ್ಧರಾಗಬೇಕಾದುದು ಅತಿ ಅವಶ್ಯವೆನಿಸಿದೆ. ಸರಳ ಜೀವನ, ರುಜು ಮಾರ್ಗಗಳು ವ್ಯಕ್ತಿಯ ಹಿರಿಮೆಯನ್ನು ಹೆಚ್ಚಿಸಿ ಸಾಮಾಜಿಕ ಶಾಂತಿ – ಸುಧಾರಣೆಗೆ ಸಹಾಯಕವೆಂಬುದನ್ನು ತಿಳಿಯಬೇಕು. ದುಬಾರೀ ಜೀವನ ನಮ್ಮ ಹಾಗೂ ರಾಷ್ಟ್ರದ ಘನತೆಯನ್ನೇನೂ ಹೆಚ್ಚಿಸುವುದಿಲ್ಲ.

**ಆತ್ಮಶಕ್ತಿ, ಜೀವನ ಶ್ರದ್ಧೆ :**

ಈ ಸರ್ವೋದಯದಲ್ಲಿ ಶರೀರ ಶ್ರಮ, ವಿಕೇಂದ್ರೀಕರಣ, ಅಪರಿಗ್ರಹ, ಸ್ವಾವಲಂಬನೆ ಇವೇ ಮುಖ್ಯ ಸೂತ್ರಗಳು, ತತ್ವಗಳೂ ಆಗಿವೆ. ವ್ಯಕ್ತಿಯ ಜೀವನದಲ್ಲಿ ಆತ್ಮಶಕ್ತಿಯ ಬಲದಷ್ಟೇ ಸರ್ವೋದಯಕ್ಕೂ ಹೆಚ್ಚಿನ ಆತ್ಮಶ್ರೀ ಬೆಳೆಯಬೇಕಾದರೆ ಇವೆಲ್ಲ ತತ್ವಗಳು ಸರಿಯಾಗಿ ಅನುಷ್ಠಾನ ಗೊಳ್ಳಬೇಕಾಗುತ್ತದೆ. ಶರೀರದ ಯಾವ ಅಂಗವೂ ಕಡೆಯದೆನ್ನಿಸುವುದೇ ಇಲ್ಲ. ಅದಕ್ಕೆ ಏನಾದರೂ ಸಣ್ಣ ತೊಂದರೆಯಾದರೂ ಶರೀರದ ಸ್ವಾಸ್ಥ್ಯ ಶ್ರಮ ನಿರ್ವಹಣೆ ಕುಂಠಿತಗೊಳ್ಳುತ್ತದೆ. ಅದರಂತೆ ಸರ್ವೋದಯದಲ್ಲೂ ಯಾವ ಸಂಗತಿಯನ್ನೂ ಅಲಕ್ಷಿಸುವ ಹಾಗೇ ಇಲ್ಲ. ಶರೀರ ಶ್ರಮ ನಡೆಯದಿದ್ದರೆ ಉತ್ಪಾದನೆ ತಗ್ಗುತ್ತದೆ. ಆಗ ಅನ್ಯರ ಶ್ರಮದಿಂದ ಸಿದ್ಧವಾದ ಸೊತ್ತನ್ನೇ ಬಳಸಿಕೊಂಡು ಸಾಮಾಜಿಕ ಋಣವನ್ನು ಹೆಚ್ಚಿಸಿಕೊಂಡಂತಾಗುತ್ತದೆ. ದುಡಿದೇ ಜೀವಿಸಬೇಕಾದದ್ದು ನಮ್ಮ ಧರ್ಮ. ದುಡಿಯದೇ ಉಣುವವನು ಬದಕಲೂ ಅನರ್ಹ ಎಂಬುದಾಗಿ ನಮ್ಮ ಉಪನಿಷತ್ತು ಸಹ ಹೇಳುತ್ತದೆ. ಈ ಕಾರಣದಿಂದಲೇ ಗಾಂಧೀಜೀಯವರು ಶರೀರ ಶ್ರಮಕ್ಕೆ "ಅನ್ನದಾಸೋಹ" ಎಂದು ಕರೆದಿದ್ದಾರೆ. ಶಾರೀರಿಕ ಶ್ರಮವೂ ಒಂದು ಯಜ್ಞದಂತೆ. ದುಡಿದೇ ಉಣುವುದು ಸಂತುಷ್ಟ ಜೀವನದ ಲಕ್ಷಣವೆನ್ನಿಸುತ್ತದೆ.

ಆದರೆ ಕೆಲವರಿಗೆ ಶರೀರ ಶ್ರಮ ಅಥವಾ ಶ್ರಮಜೀವಿ, ಕಾರ್ಮಿಕ ಇವನು ಕನಿಷ್ಠ-ನಿಕೃಷ್ಟನಾಗಿ ಕಾಣುತ್ತಾನೆ. ಅವನ ಬಗ್ಗೆ ಸಮಾಜದಲ್ಲಿ ಗೌರವದ ವಿಚಾರ ಸಹ ಬರುವುದಿಲ್ಲ. ರಾಷ್ಟ್ರದ ಅನ್ನ ಸಂಪತ್ತು ಹೆಚ್ಚಿಸುವ ನೇಗಿಲಯೋಗಿಯನ್ನು ಎಷ್ಟು ಪ್ರೀತಿಸುತ್ತೇವೆ ? ಅವನ ತೊಂದರೆಯ ಬಗ್ಗೆ ಕಾಳಜೀ, ಸಹಾನುಭೂತಿಯೂ ಸಿಗುವುದಿಲ್ಲ. ಅವರ ಶ್ರಮಬೇಕು, ಗಳಿಕೆ ಬೇಕು, ಆದರೆ, ಸಹಾಯ-ಸಮಸ್ಯೆ ಬೇಡವೆಂದರೆ ಈ ಶ್ರಮಜೀವಿ ವರ್ಗವೇ ಪ್ರತ್ಯೇಕವೆಂಬಂತೆ ಸಿಡಿದುಕೊಂಡೀತು. ಸರ್ವೋದಯದಲ್ಲಿ ಇದಕ್ಕೆ ಆಸ್ಪದವಿಲ್ಲ. ಎಲ್ಲರೂ ಒಂದೇ ಕುಟುಂಬದವರಂತೆ ಆಗುತ್ತಾರೆ. ಭಂಗಿಯ ಕೆಲಸವಿರಲಿ, ಬಡಿಗ, ಗಾಣಿಗ, ಮೋಚಿ, ಕುಂಬಾರ ಇನ್ನಿತರ ಎಲ್ಲ ವರ್ಗದ ಜನರೂ ವೃತ್ತಿಯಿಂದ ಬೇರೆ ಬೇರೆಯಾದರೂ ಅವರ ಶ್ರಮವೆಲ್ಲ ದೇಶ ಸೇವೆಯ ದೃಷ್ಟಿಯಿಂದ ಒಂದೇ ತೆರನಾದದ್ದು ಎಂಬುದನ್ನು ಮರೆಯಕೂಡದು. ಆಚಾರ್ಯರು ಹೇಳಿದ "ಯದ್ಯತ್ ಕರ್ಮಕರೋಮಿ ತತ್ತದಖಿಲಂ ಶಂಭೋತ-ವಾರಾಧನಂ" ಪ್ರತಿಯೊಬ್ಬನೂ ತಾನು ಮಾಡುವ ಕೆಲಸವನ್ನು ಈಶ್ವರನ ಆರಾಧನೆಯೆಂದೇ ತಿಳಿದು ಮಾಡುವುದರಿಂದ ಕಾರ್ಯದ ಕೌಶಲ್ಯದ ಶ್ರೇಷ್ಠತೆ ಬೆಳೆಯುತ್ತದೆ. ಹಾಗೂ ಅದರ ಜ್ಯೇಷ್ಠತೆ ಕನಿಷ್ಠತೆಯ ತಾರತಮ್ಯತೆಯೂ ಅಳಿದು ಶರೀರ ಶ್ರಮದ ಉನ್ನತ ಮೌಲ್ಯವೂ ರೂಢಿಸುತ್ತದೆ. ಇದರಿಂದ ಸಾಮಾಜಿಕ ಸಮಾನತೆ, ಜೀವನದ ಉನ್ನತ ಶ್ರದ್ಧೆ ಹೆಚ್ಚುತ್ತದೆಂದು ತಿಳಿಯಬೇಕು.

**ವಿಕೇಂದ್ರೀಕರಣ :**

ಈ ಸಮಾನತೆಯ ಸಾಧನೆಯಲ್ಲಿ ವಿಕೇಂದ್ರೀಕರಣವೂ ಪ್ರಮುಖ ಹೆಜ್ಜೆಯಾಗಿದೆ. ಉತ್ಪಾದನೆ ಹಾಗೂ ನ್ಯಾಯೋಚಿತ ವಿತರಣೆಯ ಮೂಲಕ ಶೋಷಣಾ ರಹಿತ ಸಮಾಜ ರಚನೆಗೆ ಸಹಾಯವಾಗುತ್ತದೆ. ಏಕಸ್ವಾಮ್ಯ ಅಧಿಕಾರದಿಂದ ಶ್ರಮ ಜೀವಿಯ ಹಾಗೂ ಜನ ಸಾಮಾನ್ಯರ ಆರ್ಥಿಕ ವ್ಯವಸ್ಥೆಯ ಮೇಲೆ ಬಲವಾದ ಪರಿಣಾಮ-ವುಂಟಾಗುತ್ತದೆ. ವಿತರಣೆಯಲ್ಲಿ ಪ್ರಾಮಾಣಿಕತೆಯ ಹಿಡಿತ ತಪ್ಪುವ ಸಂಭವವೇ ಹೆಚ್ಚು. ಈ ದೃಷ್ಟಿಯಿಂದ ಉತ್ಪಾದನೆ-ವಿತರಣೆಯಲ್ಲಿ ವಿಕೇಂದ್ರೀಕರಣ ಅವಶ್ಯವೆನ್ನಿಸಿದೆ. ವಿನೋಬಾರವರ ಭೂದಾನ ಯಜ್ಞ ಇದರಿಂದಲೇ ಪ್ರೇರಿತವಾದದ್ದು. ಸಾಮೂಹಿಕ ದುಡಿಮೆ, ಗಳಿಕೆ, ಹಾಗೆಯೇ ಅದರ ಸಮರ್ಪಕ ಹಂಚಿಕೆ, ಬಳಕೆ ಇದರಿಂದ ಆರ್ಥಿಕ ಹಾಗೂ ಅಧಿಕಾರ ಕೇಂದ್ರೀಕರಣ ತಪ್ಪುತ್ತದಲ್ಲದೇ ಸಾಮೂಹಿಕ ದುಡಿಮೆಯಿಂದ ಉತ್ಪಾದನೆಯೂ ಪ್ರಗತಿಶೀಲವಾಗುತ್ತದೆ. ದುರ್ಬಲರನ್ನು ಎತ್ತರಿಸುವುದರ ಜೊತೆಗೆ ಸಾಮಾಜಿಕ ಪ್ರಜ್ಞೆ-ಪರಿವರ್ತನೆಗೆ ಇದು ಅನುವು ಮಾಡುತ್ತದೆಂಬುದೇ ತಜ್ಞರ ಅಭಿಪ್ರಾಯ.

ಇದರಿಂದ ಇನ್ನೊಂದು ವಿಶಿಷ್ಟ ಪ್ರಯೋಜನವೆಂದರೆ-ಮಾನವಶಕ್ತಿಯ ಬಳಕೆ, ಗ್ರಾಮಸ್ವರಾಜ್ಯದ ಕಲ್ಪನೆಯಿಂದ ಸ್ವಾವಲಂಬನೆಗೆ ಸಾಗುವುದು. ನಮ್ಮ ಹಳ್ಳಿ-ಗಳನ್ನು ಸ್ವಯಂಪೂರ್ಣಗೊಳಿಸಿದರೆ ದಿಲ್ಲಿಯ ಪ್ರತಿಷ್ಠೆ ಹೆಚ್ಚುತ್ತದೆ. ಉತ್ಪಾದನೆಯ

ಶಕ್ತಿ ಪ್ರವಾಹ ಹಳ್ಳಿಯಿಂದಲೇ ಹರಿಯಬೇಕು. ಇಲ್ಲಿ ಮಾನವ ಶಕ್ತಿಯನ್ನು ಕಡೆಗಣಿಸುವಂತಿಲ್ಲ. ಅತಿ ಹೆಚ್ಚು ಉತ್ಪಾದನೆಯ ದೃಷ್ಟಿಯಿಂದ ಯಂತ್ರಗಳ ಬಳಕೆ ಹೆಚ್ಚಿಸಿದರೆ ಮಾನವಶಕ್ತಿಯ ಪ್ರಭಾವ ತಗ್ಗುತ್ತದೆ. ದೇಶದಲ್ಲಿ ಬೃಹತ್ ಯಂತ್ರೋಪ ಕರಣಗಳ ಅವಶ್ಯಕತೆಯೇ ಇಲ್ಲವೆಂದು ಹೇಳುವಹಾಗಿಲ್ಲ. ಆದರೆ ಜನಶಕ್ತಿಯನ್ನು ಕಡೆ ಗಣಿಸಿ ಎಲ್ಲಕ್ಕೂ ಯಂತ್ರಗಳನ್ನೇ ಅವಲಂಬಿಸುವುದು ಸಾಧುವಾಗದು. ಇದರಿಂದ ನಿರುದ್ಯೋಗ – ಬಡತನ ಹೆಚ್ಚುವ ಸಂಭವವಿರುತ್ತದೆ. ಮತ್ತೆ ಯಂತ್ರಜ್ಞಾನ ದಿಂದಲೂ ನಾವು ಹಿಂದುಳಿದವರು. ಮಾನವಶಕ್ತಿತಿಯ ಬಳಕೆಗೆ ಅಗ್ರ ಪ್ರಾಶಸ್ತ್ಯ ನೀಡಿ ನಂತರ ಯಂತ್ರೋಪಕರಣಗಳಿಗೆ ಗಮನ ನೀಡಿದರೆ ಮಾತ್ರ ಉದ್ಯೋಗದ ಹಂಚಿಕೆ ಸರಿಯಾದೀತು. ಮಾನವ ಶಕ್ತಿಗೂ ಸರಿಯಾದ ಸ್ಥಾನ — ಮಾನ ದೊರಕೀತು. ಸರ್ವೋದಯ ಸಿದ್ಧಾಂತವು ಇನದ್ನು ಹೆಚ್ಚು ಹೆಚ್ಚು ಪುರಸ್ಕರಿಸುತ್ತದೆ. ಹಾಗೂ ಆಕರ್ಷಿಸುತ್ತದೆ. ಮಾನವನು ಯಂತ್ರದ ಗುಲಾಮನಾಗದೆ ಸ್ವಶಕ್ತಿಯನ್ನು ಬೆಳಸಿ ಕೊಳ್ಳಬೇಕೆಂಬುದೇ ಇಲ್ಲಿ ಅದಕ್ಕೆ ಸ್ಪಷ್ಟ ನಿರ್ದೇಶನ ತೋರುತ್ತದೆ.

**ಸ್ವದೇಶೀ ವ್ರತ–ಹಾಗೂ ಸಮಾಜವಾದ:**

ಸ್ವದೇಶಪ್ರೀತಿ ಮತ್ತು ದೇಶೀಯ ವಸ್ತು ವ್ಯವಸ್ಥೆಯನ್ನೇ ರೂಢಿಸಿಕೊಳ್ಳುವುದು. ಇವು ಸರ್ವೋದಯದ ಅರ್ಥಶಾಸ್ತ್ರದ ಪ್ರಮುಖ ಅಂಶ. ವ್ಯಕ್ತಿ ತನ್ನ ಸುತ್ತ ಮುತ್ತಲಿನಲ್ಲಿ ಉತ್ಪಾದಿಸುವ, ಲಭ್ಯವಾಗುವ ವಸ್ತುಗಳನ್ನೇ ಕೊಂಡು ಬಳಸುವುದು, ಪರಿಸರದ ಪರಿಸ್ಥಿತಿಗಳನ್ನು ಅರ್ಥೈಸಿಕೊಳ್ಳುವುದು, ಇದರಿಂದ ಅಲ್ಲಲ್ಲಿ ಉತ್ಪಾದಿಸುವ ವಸ್ತುಗಳಿಗೆ ಹೆಚ್ಚಿನ ಮಹತ್ವ ಸಿಗುವುದಲ್ಲದೇ ವಿಫಲ ಉದ್ಯೋಗಾವಕಾಶಗಳೂ ಬೆಳೆದು ಗ್ರಾಮೀಣ ಪ್ರದೇಶದ ಆರ್ಥಿಕ ಪುನರುಜ್ಜೀವನಕ್ಕೆ ಸಹಾಯವಾಗುತ್ತದೆ. ಖಾದೀ ಬಳಕೆ, ಗ್ರಾಮೋದ್ಯೋಗಗಳ ಅಭಿವೃದ್ಧಿ, ಕಲ್ಪನೆಯಿಂದಲೇ ಮೂಡಿ ಬಂದವುಗಳಾ ಗಿವೆ. ಹಳ್ಳಿಯ ಕುಂಬಾರ, ಬಡಗಿ, ಗಾಣಿಗ, ಅಗಸ ಇವರುಗಳಿಗೆ ಹಳ್ಳಿಯಲ್ಲಿ ಉದ್ಯೋಗ ಸಿಗುವುದಿಲ್ಲೇನು ? ಅವರೇಕೆ ಪೇಟೆಗೆ ಹೋಗಬೇಕು, ಈ ಸರ್ವೋದಯದಲ್ಲಿ "ಅಪರಿ ಗ್ರಹ"ವೂ ಒಂದು ವ್ರತವೇ ಆಗಿದೆ. ತನಗೆ ಎಷ್ಟು ಅವಶ್ಯಕತೆಯೊ ಅಷ್ಟನ್ನೇ ಪಡೆ ಯುವುದು. ವಸ್ತುಗಳನ್ನೆಲ್ಲ ಕೂಡಿ ಕೂಡಿ ಸಂಗ್ರಹಿಸಿ ಇಡುವುದರಿಂದ ವಿತರಣೆಯ ವ್ಯವಸ್ಥೆ ಹದಗೆಟ್ಟು ಸಾಮಾಜಿಕ ಸ್ಥಿತಿ, ಅರ್ಥ ವ್ಯವಸ್ಥೆ ಗೊಂದಲ ತರುವಂತಾಗಬಾರದು "ಅಸಂಗ್ರಹ" ಧರ್ಮಸೂತ್ರಗಳಲ್ಲಿಯೇ ಸೇರಿದೆ.

ನಮ್ಮ ಸಮಾಜವಾದ ವ್ಯಾಖ್ಯೆಯನ್ನು ಎಷ್ಟು ವಿಸ್ತರಿಸಿದರೂ ಅದು ಮತ್ತಷ್ಟು ವಿಸ್ತೃತಗೊಳ್ಳುತ್ತದೆ. ಈ ಸಮಾಜವಾದವೆನ್ನುವುದು ಕೇವಲ ಅರ್ಥವ್ಯವಸ್ಥೆಗಷ್ಟೇ ಸೀಮಿತವಾಗದೇ ಬದುಕಿನ ಪ್ರಧಾನ ಮೌಲ್ಯ ಮಹತಿಗಳ ಅರಿವು ಅನುಷ್ಠಾನಗಳಿಗೆ ಸಹಾಯಕವಾಗುವಂತೆ ಆಗಬೇಕು. ಸಮಾಜದ ವ್ಯಕ್ತಿಗಳು ತಮ್ಮ ಸ್ವಂತಿಕೆಗಿಂತಲೂ

ಸಮಾಜದ ಉತ್ಕರ್ಷ ಶ್ರೇಯಸ್ಸಿಗಾಗಿ ಹೆಚ್ಚಿನ ಪ್ರಯತ್ನ ನಡೆಸಿದರೆ ನೈಜ ಸಮಾಜವಾದ ಅರ್ಥಾತ್ ಸರ್ವೋದಯ ಸಮಾಜ ನಿರ್ಮಾಣವಾದೀತು. ಪ್ರತಿಯೊಬ್ಬನ ದೈಹಿಕ ಬೌದ್ಧಿಕ, ವಸ್ತು ಸಂಪತ್ತುಗಳಿಗೆಲ್ಲ ಆತ ಧರ್ಮದರ್ಶಿಯೆನ್ನಿಸಿ ತನ್ನ ಹಾಗೂ ಸಮಾಜದ ಕಾರ್ಯಕ್ಕಾಗಿಯೇ ಇದನ್ನು ವಿನಿಯೋಗಿಸುವುದು ಎಂದು ತಿಳಿದರೆ ಸರ್ವೋದಯದ ಸಿದ್ಧಿ ಅಸಾಧ್ಯವಾದುದಲ್ಲ.

ದೇಶದ ಸ್ಥಿತಿ-ಗತಿಗಳುನ್ನು ಆಗಾಗ ಗಮನಕ್ಕೆ ತಂದು ಕೊಂಡು ಅದು ಎದುರಿಸುತ್ತಿರುವ ಸಮಸ್ಯೆ-ಸವಾಲುಗಳ ಪರಿಹಾರಕ್ಕೆ ಸೂಕ್ತ ವಿಚಾರ ನಿರ್ಧಾರ ಮಾಡುತ್ತಿರಬೇಕಾದುದು ಅವಶ್ಯ. ಅವನ್ನು ಅಲಕ್ಷಿಸಿದರೆ ಆ ಸಮಸ್ಯೆಗಳು ಮತ್ತಷ್ಟು ಜಟಿಲಗೊಳ್ಳುವ ಸಂಭವವೂ ಇರುತ್ತದೆ. ಇಂದು ದೇಶದ ಪರಿಸ್ಥಿತಿ ಹಾಗೇ ಆಗಿದೆ .ಒಂದು ಸಮಸ್ಯೆ ನೀಗಿದರೆ ಹತ್ತು ಸಮಸ್ಯೆ ಹುಟ್ಟಿಕೊಳ್ಳುತ್ತದೆ. ಬಡತನ ಸಿರಿವಂತಿಕೆಗಳ ಅಂತರವೂ ಹೆಚ್ಚುತ್ತ ಸಾಗಿದೆ. ದೀನ ದಲಿತರು ತಮ್ಮ ಕನಿಷ್ಠ ಅವಶ್ಯಕತೆಗಳನ್ನು ಪೂರೈಸಿಕೊಳ್ಳಲು ಇನ್ನೂ ಸಮರ್ಥರಾಗಿಲ್ಲ. ಧರ್ಮ ಜಾತಿಗಳ ಬಗ್ಗೆ ಸರಿಯಾದ ತಿಳುವಳಿಕೆ ಸಹಬಾರದೇ ಹಬ್ಬ ಹರಿದಿನಗಳಲ್ಲಿ ಮತೀಯ ಘರ್ಷಣೆ ಕಾಣಿಸಿಕೊಳುತ್ತಿರುವುದು ನಮಗೆ ಗೌರವದ ಸಂಗತಿಯಲ್ಲ. ಸ್ವಾತಂತ್ರ್ಯೋತ್ತರದಲ್ಲಿ ದೇಶದ ಪ್ರಗತಿ ನಿರೀಕ್ಷಿತ ಮಟ್ಟದಲ್ಲಿ ಸಾಧ್ಯವಾಗಿಲ್ಲ. ಹಳ್ಳಿಗಳು ಸ್ವಯಂಪೂರ್ಣಗೊಂಡು ಸ್ವಾವಲಂಬಿಯಾಗಿಲ್ಲ. ಇವೆಲ್ಲ ಕಾರಣಕ್ಕಾಗಿ ಗಾಂಧೀಜಿಯವರು ಹೇಳಿದ ಸರ್ವೋದಯ ಇದೀಗ ಅನಿವಾರ್ಯವೆನ್ನಿಸಿದೆ. ಇದು ಎಷ್ಟು ತೀವ್ರವಾಗಿ ಆಚರಣೆಯಲ್ಲಿ ರೂಢಿಸಿಕೊಂಡಿತೋ ಅಷ್ಟೇ ತೀವ್ರ ಗತಿಯಲ್ಲಿ ದೇಶದ ಪ್ರಗತಿ ಸಾಧ್ಯವಾದೀತು.

ಕವಿಯೊಬ್ಬನ ಮಾತಿನಲ್ಲಿ ಮೂಡಿಬಂದ ಸರ್ವೋದಯ ಹೀಗಿದೆ - "ನಕಾಮಯೇ ರಾಜ್ಯಭುವಂ, ನಸ್ವರ್ಗಂ, ನಾಪುನರ್ಭವಂ, ಕಾಮಯೇ ದು;ಖ ತಪ್ತಾನಾಂ ಪ್ರಾಣಿನಾಂ ಅರ್ತಿನಾಶನಂ.

---

ಧರಣಿಯ ಮೇಲೊಂದು ಹಿರಿದಪ್ಪ ಅಂಗಡಿಯನಿಕ್ಕಿ
ಹರದ ಕುಳ್ಳಿರ್ದ ನಮ್ಮ ಮಹದೇವಶೆಟ್ಟಿ
ಒಮ್ಮನವಾದರೆ ಒಡನೆ ನುಡಿವನು
ಇಮ್ಮನವಾದರೆ ನುಡಿಯನು
ಕಾಣಿಯ ಸೋಲ ಅದ್ದಗಾಣಿಯ ಗೆಲ್ಲ
ಬಹುಜಾಣ ನಮ್ಮ ಕೂಡಲಸಂಗಮದೇವ.

ಬಸವಣ್ಣನವರು.

# ಶಿವ ಸಹಸ್ರನಾಮದ ವೈಶಿಷ್ಟ್ಯವೇನು?

ಪ. ರಾಮಕೃಷ್ಣ ಶಾಸ್ತ್ರಿ, ಶಿವಶಕ್ತಿ ನಿಲಯ, ಅಂಚೆ ; ಮಂಚಿನ - 574 295 (ದ.ಕ.)

ಮಂಗಲಸ್ವರೂಪಿಯಾದ ಭಗವಂತನನ್ನು ಸಾವಿರ ನಾಮಗಳಿಂದ, ಅನಂತರ ನೂರಎಂಟು ನಾಮಗಳಿಂದ ಭಜಿಸಿ ನಮಸ್ಕರಿಸುವುದು ಪುಣ್ಯಪ್ರದವೆಂದು ಸನಾತನ ಧರ್ಮವು ಸಾರುತ್ತದೆ ಅದೇ ರೀತಿಯಲ್ಲಿ ಕೃತಯುಗದಲ್ಲಿ ಧ್ಯಾನದಿಂದ, ತ್ರೇತದಲ್ಲಿ ಯಜ್ಞದಿಂದ ದ್ವಾಪರದಲ್ಲಿ ಅರ್ಚನೆಯಿಂದ ಸುಲಭದಲ್ಲಿ ದೇವರು ಒಲಿಯುತ್ತಿದ್ದನಾದರೆ ಈ ಕಲಿಯುಗದಲ್ಲಿ ಸಹಸ್ರನಾಮ ಜಪವೇ ದೇವರ ಸಾಕ್ಷಾತ್ಕಾರಕ್ಕೆ ಸುಲಭವಾದ, ಮಹತ್ತರವಾದಸಾಧನವೆಂದು ಪೌರಾಣಿಕರು ಸಾರಿದ್ದಾರೆ. ನಾಮ ಜಪವು ಯಜ್ಞಕ್ಕೆ ಸಮಾನವೆಂದು ಗೀತಾಚಾರ್ಯ ಕೃಷ್ಣನೇ ತಿಳಿಸಿದ್ದಾನಲ್ಲವೆ? ಸಹಸ್ರನಾಮಗಳು ಬೇರೆ ಬೇರೆ ಹೆಸರಿನ ದೈವಶಕ್ತಿಗಳಾಗಿ ಸಿದ್ಧಗೊಂಡರೂ ಲಲಿತೆ, ವಿಷ್ಣು, ಲಕ್ಷ್ಮಿ ಮತ್ತು ಶಿವ ಸಹಸ್ರನಾಮಗಳು ಮಾತ್ರ ಖ್ಯಾತಿಗೊಂಡು ಸರ್ವತ್ರ ಬಳಕೆಗೆ ಬಂದಿವೆ.

ಉಳಿದೆಲ್ಲ ಸಹಸ್ರನಾಮಗಳು ಒಂದೇ ರೀತಿಯವಾಗಿದ್ದರೆ ಶಿವ ಸಹಸ್ರನಾಮ-ಗಳು ಮಾತ್ರ ಏಳು ರೀತಿಯಲ್ಲಿ ಪ್ರಚಲಿತವಾಗಿವೆ. ಒಂದರಲ್ಲಿ ಬರುವ ಹೆಸರುಗಳು ಇನ್ನೊಂದರಲ್ಲಿ ಬಾರದಷ್ಟು ಅವುಗಳ ರೀತಿ ವಿಭಿನ್ನವಾಗಿದೆ. ಶಿವರಹಸ್ಯ, ಶಿವಪುರಾಣ, ಸ್ಕಾಂದ ಪುರಾಣ, ಲಿಂಗಪುರಾಣ, ಪದ್ಮಪುರಾಣ, ಸೌರಪುರಾಣಗಳಲ್ಲಿ ಆರು ವಿಧದ ಶಿವಸಹಸ್ರನಾಮಗಳು ಬಳಕೆಯಲ್ಲಿದ್ದರೂ ಅವುಗಳ ಪ್ರಸಿದ್ಧಿ ಮತ್ತು ಪಸರಿಸುವಿಕೆ ತೀರ ವಿರಳವಾಗಿದೆ. ಪ್ರಸಿದ್ಧವೂ ಸಂಪ್ರದಾಯವಿದರಲ್ಲಿ ಹೆಚ್ಚು ಬಳಕೆಯಲ್ಲಿರುವಂಥದೂ ಆದ ಶಿವಸಹಸ್ರನಾಮ ಪಾಠ ಮಹಾ ಭಾರತದ ಅನು ಶಾಸನಿಕ ಪರ್ವದ ಹದಿನೇಳನೆಯ ಅಧ್ಯಾಯದಲ್ಲಿ ಉಕ್ತವಾಗಿದೆ.

ಆಚಾರ್ಯ ಭೀಷ್ಮರು ಸರಳ ಮಂಚದಲ್ಲಿ ಪವಡಿಸಿದ್ದಾಗ ಯುಧಿಷ್ಠಿರನಿಗೆ ಅವರ ಬಾಯಿಂದಲೇ ಶಿವ ನಾಮೋಚ್ಚಾರಣೆಯನ್ನು ಆಲಿಸಿಸಬೇಕೆನ್ನುವ ಆಶೆಯುಂಟಾಯಿ ತಂತೆ. ಆದರೆ ಆಯಾಸದಿಂದ ಬಳಲಿರುವ ಭೀಷ್ಮರಿಂದ ಅದು ಅಸಾಧ್ಯವೆನಿಸಿದಾಗ ಶಿವನ ಸಖ ಮಾತ್ರವಲ್ಲ ಮಹಾಭಕ್ತನಾದ ಕೃಷ್ಣನಿಂದ ಶಿವನಾಮ ಸಹಸ್ರವನ್ನು ತಿಳಿಸುವಂತೆ ಆದೇಶಿಸಿದರು. ಇದು ಹರ ಮೇಲೋ ಹರಿ ಮೇಲೋ ಎಂದು ವೃಥಾ ಚರ್ಚೆ ಮಾಡು ವವರಿಗೆ ಹರಿಹರರೊಳಗೆ ಭೇದವಿಲ್ಲ, ಎರಡೂ ಪ್ರಪಂಚದಾಟ ಆಡಿಸುವ ಐಕ್ಯಶಕ್ತಿ ಗಳೆಂದು ತಿಳಿಸಲೊಂದು ನಾಟಕ ಅಷ್ಟೆ.

ಶ್ರೀಕೃಷ್ಣ ಯಾಕೆ ಶಿವಭಕ್ತನಾದ ಎಂದರೆ ಅವನಿಗೊಂದು ಸಲ ಶಿವದರ್ಶನ ಮಾಡಬೇಕೆಂಬ ಬಯಕೆಯುಂಟಾಗಿ ತಪಸ್ಸಿಗಾಗಿ ಹಿಮಾಚಲ ಪರ್ವತಕ್ಕೆ ತೆರಳಿದ. ಅಲ್ಲಿ ಉಪಮನ್ಯು ಎಂಬ ಮುನಿಯಿಂದ ದೀಕ್ಷಾಬದ್ಧನಾಗಿ ತಪಸ್ಸನ್ನು ಆರಂಭಿಸಿದ ಶಿವದರ್ಶನ ಪಡೆಯುವುದರಲ್ಲಿ ಸಫಲನಾದನು. ಬಳಿಕ ಆತನು ಉಪಮನ್ಯುವಿನ

ಬಳಿಗೆ ಮರಳಿದಾಗ ಆತನು, ಕೃತಯುಗದಲ್ಲಿ ಮಹರ್ಷಿ ತಂಡಿಯು ಪರಶಿವನನ್ನು ಭಕ್ತಿ ಪರವಶತೆಯಿಂದ ಧ್ಯಾನಿಸುತ್ತಾ ಹತ್ತು ಸಹಸ್ರ ವರುಷಗಳ ಕಾಲ ಸಮಾಧಿ ಸ್ಥಿತಿ ಗೇರಿದ್ದ. ಶಿವನು ಅವನ ತಪಸ್ಸಿಗೊಲಿದು ಮೈದೋರಿದಾಗ ಅನೇಕ ವಿಧದಿಂದ ಶಿವನನ್ನು ತಂಡಿಯು ಸ್ತುತಿಸಿದರೂ ಮನತಣಿಯದೆ ಬ್ರಹ್ಮನು ಹಿಂದೆ ಶಿವನನ್ನು ಭಜಿಸಿದ ಹತ್ತು ಸಾವಿರ ನಾಮಗಳನ್ನು ಪಠಿಸಿ ಹೊಗಳಿದನು. ಅದರಿಂದ ಶಿವನಿಗೆ ಬಹು ಸಂತೋಷವಾಯಿತು ಅವನು ದಿವ್ಯಜ್ಞಾನ, ಅಕ್ಷಯತ್ವಗಳೇ ಮುಂತಾದ ನಾನಾ ವಿಧದ ವರಗಳನ್ನು ಮಹರ್ಷಿಗೆ ಕರುಣಿಸಿ ಕೈಲಾಸಕ್ಕೆ ತೆರಳಿದನು. ತಂಡಿ ಮಹರ್ಷಿಯು ಬ್ರಹ್ಮನಿಂದ ಪಡೆದ ಹತ್ತು ಸಾವಿರ ಶಿವ ನಾಮಗಳಲ್ಲಿ ಒಂದು ಸಾವಿರ ನಾಮಗಳನ್ನು ನನಗೆ ಹೇಳಿದ್ದಾನೆ. ಅದನ್ನು ನಿನಗೀಗ ಬೋಧಿಸುತ್ತೇನೆ' ಎಂದು ಕೃಷ್ಣನಿಗೆ ಉಪದೇಶಿಸಿದನು.

ಹೀಗೆ ಉಪಮನ್ಯುವು ಕೃಷ್ಣನಿಗೆ ಬೋಧಿಸಿದ ಶಿವಸಹಸ್ರನಾಮವು ೧೨೩ ಶ್ಲೋಕಗಳಿದ್ದು ಅವುಗಳ ನಾಮ ವಿಂಗಡಣೆಯು ಬಳಿಕ ನಡೆಯಿತು. ಈ ಅನನ್ಯವು ಅಮೃತವು ಆದ ನಾಮಸಂಗ್ರಹವನ್ನು ಯುಧಿಷ್ಠಿರನಿಗೆ ಕೃಷ್ಣನು ಹೇಳಿದನು. ವೇದವೇದಾಂಗಗಳಲ್ಲಿ ಕಾಣ ಸುವ, ಹೆಸರುಗಳಿಂದ ಸರ್ವ ಲೋಕ ಪ್ರಸಿದ್ಧಿಗಳಿಸಿದ ಸ್ತೋತ್ರಕ್ಕೆ ಅತ್ಯಂತ ಯೋಗ್ಯ ನಾದ ಶಿವನನ್ನು ಸ್ತೋತ್ರಾರಂಭದಲ್ಲೇ ಸ್ತುತಿಸಲಾಗಿದೆ.

ನಾಮ ಶ್ರೇಷ್ಠತೆಗೆ ತಕ್ಕ ಫಲವನ್ನು ಸಿದ್ಧಿಯನ್ನೂ ಸಮರ್ಥಗಳನ್ನು ನೀಡಬಲ್ಲ ಮಹತ್ತು ಈ ನಾಮುಗಳದು. ಖ್ಯಾತರಾದ ಸಾಧುಗಳು' ತತ್ವದರ್ಶಿಗಳಾದ ಮುನಿಗಳು ಹೊಗಳಿದ ಪರಮ ಶ್ರೇಷ್ಠವಾದ, ಸ್ವರ್ಗದಾಯಕನಾದ, ಸಕಲ ಪ್ರಾಣಿಗಳಿಗೂ ಹಿತದಾಯ ಕವಾದ ಆದಿಪುರುಷ ಮಹಾದೇವನ ನಾಮ ವಿಶೇಷಗಳಿವು. ಬ್ರಹ್ಮಲೋಕದಿಂದ ಇಳಿ ಗಿಳಿದು ಎಲ್ಲೆಡೆಯೂ ನಿನದಿಸುತ್ತಿರುವ ವೇದ ಪ್ರೋಕ್ತವಾದ, ಸನಾತನವಾದ ಪರ ಬ್ರಹ್ಮ ನಾಮಗಳಿಂದ ಭವನೂ ದೇವನೂ ವಿಶ್ವರೂಪನೂ ಆದ ಶಿವನ ನಾಮೈಶ್ವರ್ಯ ವನ್ನು ವಿಸ್ತಾರವಾಗಿ ವರ್ಣಿಸಲು ಯೋಗಿಗಳಿಗೆ ನೂರು ವರ್ಷ ಹೇಳುತ್ತಲೇ ಇದ್ದರೂ ಸಾಧ್ಯವಿಲ್ಲ. ವರದನಾದ,ವರೇಣ್ಯನಾದ ಶಿವನ ನಾಮಮಹಿಮೆ ಅಂತಹದು.

ಯಾವನ ಆದಿ ಮಧ್ಯಾಂತಗಳು, ದೇವತೆಗಳು ಕೂಡ ಅರಿತಿಲ್ಲವೋ ಅಂಥವನ ಮಹಿಮೆಯನ್ನು ವರ್ಣಿಸಲು ಕೃಷ್ಣನು ಧೀಮಂತನಾದ ಶಿವನಿಂದಲೇ ಅನುಗ್ರಹ ಶಕ್ತಿ ಯನ್ನು ಪಡೆಯಬೇಕಾಯಿತು. ಜಗತ್ಕಾರಣನೂ ಆದ್ಯಂತ ರಹಿತನೂ ಆದ ಶಿವನ ಈ ಸಹಸ್ರನಾಮಗಳೆಂದರೆ ಬ್ರಹ್ಮನು ಬೋಧಿಸಿದ ದಶಸಹಸ್ರ ನಾಮಗಳನ್ನು ಮಥಿಸಿ ತೆಗೆದ ಬೆಣ್ಣೆಯೆಂದು ಕೃಷ್ಣನು ಹೇಳುತ್ತಾನೆ. ಆದ್ದರಿಂದ ಈ ನಾಮಗಳು ಗಿರಿಗಳ ಸಾರವಾದ ಬಂಗಾರದಂತೆ, ಹೂವುಗಳ ಸಾರವಾದ ಮಧುವಿನಂತೆ, ತುಪ್ಪಗಳ ಸಾರವಾದ ಕೆನೆಯಂತೆ ಹತ್ತು ಸಹಸ್ರ ನಾಮಗಳ ಸಾರವೇ ಆಯಿತು. ಇಲ್ಲಿ ನಾಲ್ಕುವೇದಗಳ ಸಾರವಿದೆ. ಸಕಲ ಪಾಪನಿವಾರಕ ಶಕ್ತಿಯಿದೆ. ಮಂಗಳ ಸ್ವರೂಪವೂ ಪುಷ್ಟಿಕರವೂ ದುಷ್ಟ ಶಕ್ತಿ ನಿವಾರ ಕವೂ ಶ್ರೇಷ್ಠವೂ ಪಾವನವೂ ಆದ ಈ ನಾಮಗಳನ್ನು ಶ್ರದ್ಧೆಯಿರುವ ಆಸ್ತಿಕನಿಗೆ ಮಾತ್ರ ಕೊಡಬೇಕು.

ಪ್ರಕಾಶಾತ್ಮನೂ ಜಗತ್ಕಾರಣ ಸ್ವರೂಪಿಯೂ ಆದ ಶಿವನನ್ನು ವಿರೋಧಿಸುವವನು ತನ್ನ ಪೂರ್ವಜನರನ್ನೂ ಮಕ್ಕಳನ್ನು ಕೂಡಿಕೊಂಡು ನರಕಕ್ಕೆ ಹೋಗುವನು. ಮರಣ ಕಾಲದಲ್ಲಿ ಈ ನಾಮೋಪದೇಶ ಪಡೆದರೆ ಪಾಪನಾಶಕವಾದ, ಮಂಗಲಕರವಾದ, ಯಜ್ಞಾದಿ ಫಲ ನೀಡಬಲ್ಲ, ಪರಮಾನಂದರೂಪದ ನಾಮಗಳಿಂದ ಮೋಕ್ಷವನ್ನ ಗಳಿಸಬಲ್ಲ.

ಬ್ರಹ್ಮನು ಶಿವ ಸಹಸ್ರನಾಮವನ್ನು ಸ್ತೋತ್ರಗಳ ರಾಜನೆಂದು ಕರೆದ. ಇದನ್ನು ದೇವತೆಗಳು ಸ್ತವರಾಜನೆಂದು ಸ್ತುತಿಸಿದರು. ತಂಡಿ ಮುನಿಯು ಈ ನಾಮಗಳನ್ನು ಭೂಮಿಗೆ ತಂದುದರಿಂದ ತಂಡೀಕೃತ ಎಂಬ ಹೆಸರು ಇದೆ. ಸಕಲ ಪಾಪಗಳನ್ನು ನಿವಾರಿಸುವ ಮಂಗಳಗಳಲ್ಲಿ ಸಕಲ ಮಂಗಳತ್ವವನ್ನು ಪಡೆದ ಈ ನಾಮಗಳೆಂದರೆ ಬ್ರಹ್ಮರಲ್ಲಿ ಬ್ರಹ್ಮನೂ ಉತ್ತಮರಲ್ಲಿ ಉತ್ತಮನೂ ಆದ ಮಹಾದೇವನ ಸ್ತುತಿ ವಾಕ್ಯಗಳು. ಈ ನಾಮ ಪಠನೆಯಿಂದ ಸಕಲ ಸಿದ್ಧಿಗಳೂ ಕೈಗೂಡುತ್ತವೆ.

ಇದು ಶಿವನಾಮದ ವರ್ಣನೆಯಾದರೆ ಸಹಸ್ರ ನಾಮವನ್ನು ಪಠಿಸುವ ಮೊದಲು ಧ್ಯಾನಿಸುವ ಧ್ಯಾನ ಶ್ಲೋಕದಲ್ಲಿ "ಬೆಳ್ಳಿ ಬೆಟ್ಟದಂತೆ ಬಿಳಿಯ ವರ್ಣದವನೂ ಬಾಲಚಂದ್ರನನ್ನು ಜಟೆಯಲ್ಲಿ ಧರಿಸಿದವನೂ ರತ್ನಾದಿ ಆಭರಣಗಳ ಧಾರಣೆಯಿಂದ ಮಿನುಗುತ್ತಿರುವ ಅಂಗಕಾಂತಿಯುಳ್ಳವನೂ ಕೈಯಲ್ಲಿ ಜಿಂಕೆಯುಮರಿ, ಪರಶು ಮೊದಲಾದುವುಗಳನ್ನು ಧರಿಸಿ, ಅಭಯಮುದ್ರೆ ಹಾಗೂ ವರ ಮುದ್ರೆಯನ್ನು ತೋರುತ್ತಿರುವವನೂ ಪ್ರಸನ್ನವದನನೂ ಪದ್ಮಾಸೀನನೂ ಸುತ್ತಲೂ ಆವ್ರೀತರಾಗಿರುವ ದೇವ ಸಮೂಹದಿಂದ ಸುತ್ತಿಸಲ್ಪಡುವವನೂ ಹುಲಿಚರ್ಮದ ವಸನವನ್ನು ಧರಿಸಿದವನೂ ಜಗತ್ಕಾರಣನೂ ಜಗದ್ವಂದ್ಯನೂ ಎಲ್ಲಾ ಭೀತಿಗಳನ್ನೂ ನಿವಾರಿಸುವವನೂ ಆಗಿರುವ ಪಂಚವದನನಾದ ಮೂರು ನೇತ್ರಗಳಿರುವ ಮಹೇಶನನ್ನು ಸದಾ ಧ್ಯಾನಿಸುತ್ತೇನೆ" ಎಂದು ಹೇಳಿ ಆನಂತರ ಸಹಸ್ರನಾಮ ಪಠಿಸುವುದು ಪದ್ಧತಿ.

ಬ್ರಹ್ಮಾದಿ ದೇವತೆಗಳಾಗಲೀ ಋಷಿಗಳಾಗಲೀ ಪೂರ್ಣವಾಗಿ ತಿಳಿಯಲು ಅಸಾಧ್ಯನಾದ ಶಿವನನ್ನು ಸಹಸ್ರನಾಮಗಳಿಂದ ಪಠಿಸಿದರೆ ಲಾಭವೇನಿದೆ! ನಿತ್ಯಯುಕ್ತನಾದ, ಶುಚಿಭೂತನಾದ ಭಕ್ತನು ಪರಿಶುದ್ಧ ಮನಸ್ಸಿನಿಂದ ಈ ನಾಮಜಪಗೈದರೆ ಭಗವಂತನನ್ನು ಹೊಂದುತ್ತಾನೆ. ಪರಬ್ರಹ್ಮನನ್ನು ಹೊಂದುತ್ತಾನೆ. ಭಕ್ತ ಪ್ರಿಯನೂ ಮೋಕ್ಷಪ್ರದನೂ ಆದ ಶಂಕರನು ಈ ನಾಮ ಪಠನೆಯಿಂದ ಸಂತೋಷಿಸುತ್ತಾನೆ.

ಶಿವನನ್ನು ಈ ನಾಮಗಳಿಂದ ಕಾರ್ಯದಿಂದಲೂ ಮಾತಿನಿಂದಲೂ ಭಾವದಿಂದಲೂ ಮನದಿಂದಲೂ ಅಲ್ಲದೆ ಮಲಗಿರುವಾಗ, ಎಚ್ಚರಿರುವಾಗ' ಕುಳಿತಿರುವಾಗ, ನಡೆಯುವಾಗ ಹೇಳುತ್ತಾ, ಸ್ತುತಿಸುತ್ತ ಇದ್ದರೆ ಆನಂದಾಮೃತವನ್ನು ಗಳಿಸುತ್ತಾನೆ.

ಜೀವನಿಗೆ ಶಿವನಲ್ಲಿ ಭಕ್ತಿಯು ಜನಿಸಬೇಕಾದರೆ ಹಲವು ಬಗೆಯ ಜೀವಜಾತಿಗಳಲ್ಲಿ ಕೋಟಿ ಸಾವಿರ ಸಲ ಜನಿಸಿ ಪಾಪವನ್ನು ನಿವಾರಿಸಿ ಕೊಂಡಿರಬೇಕಾಗುತ್ತದೆ. ಬಳಿಕ ಸರ್ವ ಕಾರಣನಾದ ಶಿವನಲ್ಲಿ ಶಿವೋಹಮಸ್ಮಿ ಎಂಬ ಅನನ್ಯ ರೂಪವಾದ ಭಕ್ತಿಯು ಎಲ್ಲಾ ವಿಧ ಹಾಗೂ ಭಾಗಗಳಿಂದ ಜನಿಸುವುದುಸಾಧ್ಯ. ಶಿವನ ಮೇಲೆ ಅವಿಚಲವಾದ ಅನನ್ಯವಾದ, ನಿರ್ವಿವಾದ ಭಕ್ತಿಯನ್ನಿರಿಸುವುದು ದೇವತೆಗಳಿಗೆ ಸಾಧ್ಯವಿಲ್ಲ, ಮನುಷ್ಯರಿಗೆ ಸುಲಭವೂ ಅಲ್ಲ. ಶಂಕರನಲ್ಲಿಯೇ! ಭಕ್ತಿಭಾವವನ್ನಿರಿಸಿ ಪರಮಸಿದ್ಧಿಗಳಿಸಲು ಕಾರಣವಾದ ತೇಜಸ್ಸನ್ನು ಗಳಿಸಲು ಶಿವನ ಅನುಗ್ರಹದಿಂದ ಮಾತ್ರ (ಇಂತಹ ಭಕ್ತಿಯು ಸ್ಥಿರಗೊಳ್ಳಲು) ಸಾಧ್ಯವಿದೆ.

ಎಲ್ಲಾ ರೀತಿಯಿಂದಲೂ ಶಿವನ ಮೊರೆ ಹೊಕ್ಕು ಶರಣಾದವರಿಗೆ ಭಕ್ತಪರಾಧೀನನಾದ ಭವನು ಸಂಸಾರ ಕೂಪದಿಂದ ಉದ್ಧರಿಸುತ್ತಾನೆ. ಆದರೆ ದೇವತೆಗಳು ಮನುಷ್ಯನಿಗೆ ಆಮಿಷವೊಡ್ಡಿ ತಪೋಬಲವನ್ನು ಕೆಡಿಸಲು ಯತ್ನಿಸುತ್ತಾರೆ. ಪವಿತ್ರವಾದ ಪುಣ್ಯಕರವಾದ ಯೋಗ, ಮೋಕ್ಷ, ಸಂತೋಷ, ಸ್ವರ್ಗದಾಯಕವಾದ ಈ ಸಾವಿರ ನಾಮಗಳಿಂದ ಶಿವನ ಸಂಕೀರ್ತನೆ ಮಾಡಿದವರಿಗೆ ಶ್ರೇಷ್ಠಸ್ಥಾನ ಲಭಿಸುತ್ತದೆ.

ಒಂದು ವರ್ಷದ ವರಗೆ ಸದಾ ಕಾಲ ಶಿವಸಹಸ್ರನಾಮ ಪಠಿಸಿದರೆ ಇಚ್ಛಿತಫಲ ದೊರಕುವುದು, ಬ್ರಹ್ಮಚಾರಿಯೂ ಜಿತೇಂದ್ರಿಯನೂ ಶುಚಿಯೂದವನೂ ಈ ಅವಧಿಯಲ್ಲಿ ಪಠಿಸಿದರೆ ಅಶ್ವಮೇಧದ ಫಲವನ್ನುಗಳಿಸುವನಲ್ಲದೆ ದಾನವರಿಂದ, ರಾಕ್ಷಸರಿಂದ ಯಕ್ಷ, ಪಿಶಾಚಿ, ಯಾತುಧಾನ' ಸರ್ವ, ಗುಹ್ಯಕಗಳಿಂದ ಯಾವತ್ತಿಗೂ ಬಾಧೆಗೊಳಗಾಗಲಾರನೆಂದು ವರ್ಣಿತವಾಗಿದೆ.

# ಅರ್ಥರಹಿತ ನಡವಳಿಕೆಗಳು :

ರಸಿಕ ಪುತ್ತಿಗೆ, ಪತ್ರಿಕೋದ್ಯಮಿಗಳು, ಚನ್ನಪಟ್ಟಣ – 571 501

"ನಮ್ಮ ಎಷ್ಟೋ ನಡವಳಿಕೆಗಳಿಗೆ ಅರ್ಥವೇ ಸಿಗುವುದಿಲ್ಲ," "ಅಜ್ಜ ನೆಟ್ಟ ಆಲದಮರ ಅಂತ ನೇಣುಹಾಕಿಕೊಳ್ಳುತ್ತೇವೆ" ಎಂದು ಹಲವು ಎಳೆಯರು ಹೇಳುವುದುಂಟು. ಆ ಮಾತಿನಲ್ಲಿ ಸತ್ಯವಿದೆ, ಕಾರಣವೂ ಇದೆ. ನಮ್ಮ ನಡವಳಿಕೆಯ ಮೂಲವನ್ನು ಅದರ ಕಾರಣ, ಅರ್ಥವನ್ನು ನಾವು ತಿಳಿಯುವ ಪ್ರಯತ್ನ ಮಾಡುವುದೇ ಇಲ್ಲ. ಆದರೆ ನಮ್ಮ ಹಾಗೇ ಮುಂದಿನ ಪೀಳಿಗೆಯೂ ಇರಬೇಕು ಎಂದೇನೂ ಇಲ್ಲವಲ್ಲ? ಅವರ ತರ್ಕ ವಾದಗಳಿಗೆ ನಾವು ತಲೆಹಾಕಲೇಬೇಕು, ಹಾಗಿಲ್ಲದಿದ್ದರೆ ಅವರು ನಮ್ಮನ್ನು ಬದಿಗೆ ಸರಿಸಿಬಿಡುತ್ತಾರೆ.

ಈಚೆಗೆ ನಮ್ಮಲ್ಲಿ ಸಭೆ ಸಮಾರಂಭಗಳಲ್ಲಿ ಒಂದು ಕ್ರಮಬದ್ಧ ಪರಿಪಾಠ ಇದೆ. ಸಮಾರಂಭದ ಅಧ್ಯಕ್ಷತೆ ಒಬ್ಬರು ವಹಿಸಿಕೊಳ್ಳಬೇಕು. ಒಬ್ಬರು ಮುಖ್ಯ ಅತಿಥಿಗಳು ಬೇಕು. ಒಬ್ಬರು ಭಾಷಣಕಾರರು ಬೇಕು. ಒಬ್ಬರು ಸಮಾರಂಭದ ಉದ್ಘಾಟನೆಗೆ ಬೇಕು. ಮತ್ತೊಬ್ಬರು ಬಹುಮಾನ ವಿತರಣೆ-ಹೀಗೆ ಹಲವು ತರದ ಇಲ್ಲದ ಸಲ್ಲದ ಅನಗತ್ಯ ಕಾರ್ಯಗಳನ್ನು ಹೊಂದಿಸಿ ಹೆಸರು ಪ್ರಿಂಟಿಸಿಬಿಡುತ್ತೇವೆ.

ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿದವನ ಕರ್ತವ್ಯ ಇಡಿಯ ಕಾರ್ಯಕ್ರಮವನ್ನು ನಡೆಸಿಕೊಡುವುದು. ಆದರೆ ಈಗ ಅಧ್ಯಕ್ಷ ಸುಮ್ಮನೆ ಗುಮ್ಮನಂತೆ ಕೂರುತ್ತಾನೆ. ಆತನ ಕಾರ್ಯ ನಿರ್ವಹಿಸಲು ಒಬ್ಬ ನಿರೂಪಕ ಅಥವಾ ನಿರ್ದೇಶಕ ಬರುತ್ತಾನೆ, ಕೆಲವು ಸಲ ನಿರ್ದೇಶಕನ ಜೊತೆಗೆ ನಿರೂಪಕನೊಬ್ಬನೂ ಇರುವುದಿದೆ. ಇವುಗಳೆಲ್ಲ ಪೃಷ್ಠ ಪೋಷಣೆ ಅಂದರೆ ಖುಷಿಪಡಿಸಲು ಮಾಡುವ ಹುನ್ನಾರುಗಳು ಇಂಥ ಹುನ್ನಾರುಗಳಲ್ಲಿ ದೀಪ ಹಚ್ಚುವುದು ಕೂಡ ಒಂದು. ದೀಪ ಬೆಳಗಿಸಿಯಾವ ಕಾರ್ಯ ಮಾಡುವುದು? ಎಲ್ಲಿ ದೀಪ ಬೆಳಗಿಸಬೇಕು? ಯಾರು ಯಾವ ರೀತಿ ಬೆಳಗಿಸಬೇಕು? ಎಂಬಿತ್ಯಾದಿ ಯಾವ ವಿಧಿ ವಿಧಾನಗಳ ಪರಿವೆಯೂ ಇಲ್ಲದೆ ಈ ಕಾರ್ಯ ನಡೆಯುತ್ತದೆ.

ಕಾರ್ಯಕ್ರಮ ಆರಂಭವಾದ ಎಷ್ಟೋ ಹೊತ್ತಿನ ನಂತರ ಒಂದು ಪುಸ್ತಕದ ಬಿಡುಗಡೆ ಆಗಬೇಕು. ಆ ಪುಸ್ತಕದ ಬಿಡುಗಡೆಗೆ ಮೊದಲು ವೇದಿಕೆಯ ಪಕ್ಕದಲ್ಲಿ ಇಟ್ಟ ಪೀಠದ ಮೇಲೆ ಇರಿಸಿದ ದೀಪವನ್ನು ಬೂಟುಗಾಲಿನ ಮಹಾತ್ಮರು ಕ್ಯಾಂಡೆಲ್‌ನಿಂದ ಬೆಳಗುತ್ತಾರೆ. ಅವರ ಆ ಕಾರ್ಯವನ್ನು ಏನೋ ಚಮತ್ಕಾರವೆಂಬಂತೆ ಸುತ್ತ ನಾಲ್ಕಾರು ಜನ ನಿಂತು ನೋಡುತ್ತಾರೆ. ಆಗ ಕ್ಯಾಮರಾಗಳು 'ಕ್ಲಿಕ್' ಆಗುತ್ತವೆ. ಇದಕ್ಕೆಲ್ಲ ತಾಳಮೇಳ ಇಲ್ಲ. ಅರ್ಥವಂತೂ ಖಂಡಿತ ಇಲ್ಲ

ಕ್ರಮುವೂ ಇಲ್ಲ. ದೀಪ ಬೆಳಗ ಬೇಕಾಗಿದ್ದರೆ ಕಾರ್ಯಕ್ರಮಕ್ಕೆ ಮೊಟ್ಟಮೊದಲ
ಇನ್ನೊಂದು ದೀಪದಿಂದ ಮತ್ತೊಂದು ದೀಪವನ್ನು ಪರಿಕ್ರಮವಾಗಿ ಪರಿಶುದ್ಧವಾಗಿ ಬೆಳ
ಗಿಸಬೇಕು. ಬತ್ತಿಯನ್ನು ಬೆರಳಿನಿಂದ ದೂಡುವುದು ಮುಂದೆ ಮಾಡುವುದು ನಿಷಿದ್ಧ
ಇದನ್ನೆಲ್ಲಾ ನಾವು ಯಾವ ಮುಲಾಜು ಇಲ್ಲದೆ ಮರೆತುಬಿಡುತ್ತೇವೆ.

ಮೊನ್ನೆ ಒಂದು ಸಮಾರಂಭದಲ್ಲಿ ಝುಗಝುಗಿಸುವ ವೇದಿಕೆಯ ಪಕ್ಕದಲ್ಲಿ
ಇರಿಸಿದ ಪುಟ್ಟದೀಪಬೆಳಗಿಸುವ ಮಹಾಪುರುಷನನ್ನು ಕಂಡು ನನ್ನ ಮೊಮ್ಮಗಳು ಕೇಳಿ
ದಳು: ತಾತಾ ಅಲ್ಲಿ ಯಾಕೆ ದೀಪ ಹಚ್ತಾರೆ? ಕತ್ತಲೆ ಇಲ್ಲವಲ್ಲ?"

ಈ ಪ್ರಶ್ನೆಗೆ ಉತ್ತರ ಕೊಡಲು ಬಹಳ ಹೊತ್ತು ಹಲವು ಪ್ರಶ್ನೆಗಳಿಗೆ ಉತ್ತರಿಸಿ
ಸಮ ಜಾಯಿಸಬೇಕಾಯಿತು.

ಅಂದರೆ ನಮ್ಮ ಆಚರಣೆಗಳು ಒಂದ ಸಣ್ಣ ಮಗುವೂ ಪ್ರಶ್ನಿಸುವಷ್ಟು ಕೆಲವು ಸಲ
ಬಾಲಿರುತ್ತವೆ.

ನಮ್ಮ ಎಲ್ಲ ನಡವಳಿಕೆಗಳೂ ಸತ್ಯಂ ಶಿವಸುಂದರದ ಸಂಪುಟಗಳು. ಅವುಗಳಲ್ಲಿ
ಸಾಮಾಜಿಕ ಹಿತ, ಶಾರೀರಿಕ ಸುಖ, ಮಾನಸಿಕ ನೆಮ್ಮದಿ ಅಡಗಿರುತ್ತಿತ್ತು. ಆ ರೀತಿ
ಅವುಗಳನ್ನು ಸಂಯೋಜಿಸಿದ್ದರು.

ಈಗ ಅತಿಥಿಗಳ ಕಡೆ ನೋಡುವ, "ಅತಿಥಿ" ಶಬ್ದಕ್ಕೆ ನಿಘಂಟು ನೀಡುವ
ಅರ್ಥದಂತೆ ಕರೆಯಿಲ್ಲದೆ ಅಕಸ್ಮಾತಾಗಿ ದಾರಿಯಲ್ಲಿ ಹೋಗುತ್ತಿದ್ದು ಮನೆಗೆ
ಬಂದವನು ಅತಿಥಿ. ನಾವು ಕರೆಯುವುದಿಲ್ಲ. ಎಲ್ಲಿಗೋ ಹೋಗುತಿದ್ದವನು ನಮಲ್ಲಿಗೆ
ಬಂದ. ಅವನು ಅತಿಥಿ. ಆದರೆ ನಮ್ಮ ಸಮಾರಂಭದ ಮುಖ್ಯ ಅತಿಥಿ ಅಥವಾ
ಅತಿಥಿಗಳು ಹತ್ತು ಸಲ ಹೇಳಿಸಿಕೊಂಡು ಕಾರ್ಯಕ್ರಮದ ಅರ್ಧ ಗಂಟೆಗೆ ಮೊದ
ಲೊಮ್ಮೆ ಕರೆಸಿಕೊಂಡು ಕಾದು ಕಾದು ನಂತರ ಬರುತ್ತಾನೆ-ಬರುತ್ತಾರೆ. "ಚೀಫ್ ಗೆಸ್ಟ್"
ಇದನ್ನು ಕಂಡು ನಮ್ಮ ಹುಡುಗರು, ನಗುತ್ತಾರೆ. (ಅವರಿಗೆ ಅತಿಥಿ ಶಬ್ದದ ಅರ್ಥ
ತಿಳಿದಿದ್ದರೆ ಮಾತ್ರ)" ಇಲ್ಲದಿದ್ದರೆ ನಗುವುದು– "ಎಷ್ಟು ಜನ ಅತಿಥಿಗಳು? ಇವರೆಲ್ಲಾ
ಯಾಕೆ? ಎಂದು ಹಾಸ್ಯ ಮಾಡಿ.

ಇಂಥ ಹತ್ತಾರು ಅರ್ಥವಿಲ್ಲದ ನಡವಳಿಕೆಗಳು ನಮ್ಮಲ್ಲಿ ಬೇರು ಬಿಟ್ಟವೆ
ಅವುಗಳ ಪ್ಯಾಶನ್ ಆಗಿವೆ. ಅಂಥವುಗಳಲ್ಲಿ ಬಿರುದು" ನೀಡುವುದು ಕೂಡಾ ಒಂದು.
ಈ ಬಿರುದು ನೀಡುವ ಪರಿಪಾಠ ನಮ್ಮ ಮೂಲದ್ದಲ್ಲನೆಂದು ಕಾಣುತ್ತದೆ. ಇದು
ಆಂಗ್ಲರಿಂದ ಬಂದುದು. ಆಂಗ್ಲರು ನಮ್ಮವರಿಗೆ ಬಿರುದು ನೀಡಿ ಪೂಸಿಮಾಡಿ ಕಿಸೆಗೆ
ಇಳಿಸಿಕೊಳ್ಳುತ್ತಿದ್ದರು. ಅವರ ಕಾರ್ಯ ಸಾಗಲು ನಾವು ಸುಮ್ಮನಿರಬೇಕಾಗಿತ್ತು

ಹಾಗಾಗಿ ಹಾಗೆ ಮಾಡುತ್ತಿದ್ದರು. ಆದರೆ ನಾವು? ಭಾರತದ ಕಲ್ಪನೆಯೇ ಇಲ್ಲದೆ ವ್ಯಕ್ತಿಗೆ ಆದರ ಉದ್ದಗಲ ತಿಳಿಯದವನಿಗೆ "ಭಾರತರತ್ನ" ಬಿರದು ನೀಡುತ್ತೇವೆ. ಶಂಕರ ಮಧ್ವರಂತಹ ಮಹಾನ್ ವ್ಯಕ್ತಿಗಳಿಗೂ ಭಾರತರತ್ನ ಎಂದು ಬಿರುದು ಸಲ್ಲುತ್ತದೋ ಇಲ್ಲವೋ ಸಂಶಯ ಅಂಥದರಲ್ಲಿ ಯಾರನ್ನೋ ಖುಶಿಗೊಳಿಸಲು ಯಾರಿಂಗೋ ಪೂಸಿಮಾಡಲು ಏನೋ ಒಂದು ಬಿರುದು ನೀಡಿಬಿಡುತ್ತೇವೆ.

ಮೊನ್ನೆ ಮೊನ್ನೆಯವರೆಗೆ ಧರ್ಮ ಸಂಪ್ರದಾಯ ದೇವರು ಬ್ರಾಹ್ಮಣಗಳನ್ನು ಹೀನಾಮಾನಾ ನಿಂದಿಸಿದ ವ್ಯಕ್ತಿಗೆ ಒಮ್ಮಿಂದೊಮ್ಮೆಗೇ "ಧರ್ಮಧುರಂಧರ" ನೆಂದು ಬಿರುದು ನೀಡಿ ಸಮ್ಮಾನಿಸಲು ಹಿಂಜರಿಯವುದಿಲ್ಲ. ಅದು ಒಂದು ವಿಧದಲ್ಲಿ ಬೊಗಳುವ ಬಾಯಿಗೆ ಬಿರಡೆ ಹಾಕಿದ ಹಾಗೆ, ಇದರಿಂದ ಆತ್ಮವಂಚನೆ ಮಾಡಿಕೊಳ್ಳು ತ್ತಿರುವುದು ನಮಗೇ ತಿಳಿಯುವುದಿಲ್ಲ ವೆಂದಾದರೂ ನಮ್ಮ ಮುಂದಿನ ಪೀಳಿಗೆ ಯುವಕ ರಿಗೆ ತಿಳಿದೇ ತಿಳಿಯತ್ತದೆ ಅವರು ನೋಡಿ ನಗುತ್ತಾರೆ. ನಮ್ಮ ಹಿಪೋಕ್ರಸಿ ಅವರಿಗೆ ತಿಳಿಯತ್ತದೆ.

ಹೀಗೇ ಬಹುಮಾನ ವಿತರಣೆ, ವಂದನಾರ್ಪಣೆಗಳೂ ಹಾಸ್ಯದ ಸಾಮಾಗ್ರಿಗಳಾ ಗಿವೆ. ಬಹುಮಾನವನ್ನು ಸ್ಟೀಲ್‌ತಟ್ಟೆ, ಪೆನ್ಸಿಲ್, ಪುಸ್ತಕಗಳ ಮಟ್ಟಿಕ್ಕೆ ಇಳಿಸಿ ವಿತರಣೆ ಮಾಡುವ ಹಾಸ್ಯಾಸ್ಪದ ಕಾರ್ಯ ಮಾಡದಿರುವ ಶಾಲಾ ಕಾಲೇಜುಗಳೇ ಇಲ್ಲ. ಮಾನವನ್ನು 'ಬಹು' ಮಾಡುವುದು ಸಾಧ್ಯ. ಆದರೆ ಅದನ್ನು ವಿತರಿಸುವುದು ಹೇಗೆ ಎಂದು ಯಾರು ಯೋಚಿಸುವುದೇ ಇಲ್ಲ. ವಿತರಿಸಲಿ ಹುಡುಗ ಹುಡುಗಿಯರಿಗೆ ಉಪಯುಕ್ತ ಇನಾಮು " ಕೊಡಲಿ ಖುಷಿಗಾಗಿ ಮೆಚ್ಚುಗೆ ವ್ಯಕ್ತಪಡಿಸಲು ಇನಾಂ ಕೊಡಬಹುದು. ಹಾಗೇ ವಂದನೆಯನ್ನು ಅರ್ಪಿಸುವುದು ಸಾಧ್ಯ ವಿಲ್ಲ ವಂದಿಸಬಹುದು. ವಂದನೆ ಎಂದು ಹೇಳಬಹುದು ಧನ್ಯವಾದ ಹೇಳಬಹುದು ಹೊರತ ವಂದನೆ ಅರ್ಪಿಸುವುದು ಬೇಡ, ಸರಿಯಾಗುವುದಿಲ್ಲ.

ಹಾಗೆ ಆರಂಭದಲ್ಲಿ ಸ್ವಾಗತಿಸವುದೂ ಕೂಡ ಒಂದು ರೀತಿಯ ಪ್ರಹಸನವಾಗಿದೆ ಸ್ವಾಗತ ಭಾಷಣ''ವೂ ಇದರ ಜೊತೆಗೆ ಸೇರುತ್ತದೆ ಅದರ ಬದಲುಅತಿಥಿಗಳ ಪರಿಚಯ ಆಹ್ವಾನಿತರ ಪರಿಚಯ ಪ್ರಸ್ತಾವನೆ ಇತ್ಯಾದಿಗಳನ್ನು ಹಮ್ಮಿಕೊಳ್ಳಬಹುದು. ಗೇಟಿನ ಹತ್ತಿರವೇ ನಿಂತು ಕೈಕುಲುಕಿ ಒಳಗೆ ಕರಕೊಂಡು ಬರುವುದೇ, ಸ್ವಾಗತಂ ಎಂದು ಹೇಳು ವುದೇ ಸಾಕು ಸ್ವಾಗತಂ ಎಂದು ಹೇಳುವ ಗೀತೆ ಹಾಡುವುದಿದ್ದರೆ ಬರುವಾಗಲೇ ಹೇಳಲಿ ಬಂದು ಕುಳಿತ ನಂತರ ಸರಿಬರುವುದಿಲ್ಲ ಜೊತೆಗೆ ''ಸುಸ್ವಾಗತಂ'' ಎಂದು ಹೇಳಬಾರ ದೆಂದೂ ನಾವು ತಿಳಿದಿರಬೇಕು. ಸ್ವಾಗತಂ ನಲ್ಲೇ 'ಸು ಇದೆ. ನೀವು ಸ್ವಾಗತಂ ಎಂದಾಗ ಸ್ವಾಗತಿಸಲ್ಪಟ್ಟವನು "ಸುಸ್ವಾಗತಂ" ಎಂದು ಉತ್ತರಿಸಬೇಕೇ ಹೊರತು ನೀವೇ ಸುಸಾಗತ ಎಂದು ಹೇಳಬಾರದು.

ಹಾಗೇ ಇತರ ಹಲವು ಅಬ್ದಗಳ ಜೊತೆಗೆ ಮನರಂಜನಾ ,, ಕಾರ್ಯಕ್ರಮ ಸಾಂಸ್ಕೃತಿಕ ಕಾರ್ಯಕ್ರಮಗಳೂ ಸೇರುತ್ತವೆ. " ಡಿಸ್ಕೊಡಾನ್ಸ್ " ಸಾಂಸ್ಕೃತಿಕ ಕಾರ್ಯಕ್ರಮದಲ್ಲಿ ಸೇರಿಸಿದರೆ ಹೇಗೆ. ಭೂತದ ಕೋಲ ಹೇಗೆ ಸಾಂಸ್ಕೃತಿಕ ಕಾರ್ಯಕ್ರಮವೋ ಮನರಂಜನೆಯೋ ಹೇಗೆ ಆಗುತ್ತದೆ. ಆದು ಆರಾಧನಾ ಪದ್ಧತಿ ಆದಕ್ಕೆ ಒಂದು ವಿಶಿಷ್ಟ ರೀತಿಯ ಗೌರವ ಇದೆ. ಕುಡುಕನ ವೇಷ ಹಕಿ ಬಾಟ್ಲನಲ್ಲಿ ಬಿಳಿ ನೀರು ಹಿಡಿದುಕೊಂಡು ತೂರಾಡುವ ಬಾಲಕನ ಬಾಲಿಶ ಕಾರ್ಯಕ್ರಮ ಮನರಂಜನಾ ಕಾರ್ಯಕ್ರಮವೇ ? ಸಾಂಸ್ಕೃತಿಕ ಕಾರ್ಯಕ್ರಮವೇ ? ಇದಕ್ಕೆಲ್ಲಾ ನಾವು ಕಣ್ಣಿದ್ದ ಕುರುಡರ ಹಾಗೆ ನೋಡುತ್ತ ಸುಮ್ಮನಿರುತ್ತೇವೆ.

ವಿದೇಶಿಯರಲ್ಲಿ " ಮ್ಯಾನರ್ಸ್" ಎಟಕಿಸಿ ಮುಂತಾದ ಪಧಗಳ ಹಿನ್ನೆಲೆಗೆ ನಡವಳಿಕೆ ಶಿಷ್ಟಾಚಾರಗಳನ್ನು ಕಲಿಸಿಕೊಡುವ ವ್ಯವಸ್ಥೆಯೇ ಇದೆ. ಆದರೆ ನಮ್ಮ ಮಕ್ಕಳಿಗೆ ನಾವು ಈ ರೀತಿ ನಮ್ಮ ಸಂಪ್ರದಾಯ, ಸಂಸ್ಕೃತಿಯ ಶಿಷ್ಟಾಚಾರ ಕಲಿಸಿದ್ದೆವೇಯೆ

ಮನೆಗೆ ಅತಿಥಿ ಬಂದರೆ ಅವರನ್ನು ಸ್ವಾಗತಿಸುವ, ಮಾತಾಡಿಸುವ ಕುಶಲ ಪ್ರಶ್ನೆ ಕೇಳುವ ಪ್ರಶ್ನಿಸುವ ಕ್ರಮವನ್ನು ನಾನೆ ತಿಳಿದಿಲ್ಲವೆಂದ ಮೇಲೆ ಮುಂದಿನ ಪೀಳಿಗೆಗೆ ಯಾರು ತಿಳಿಸಬೇಕು? ಲಕ್ಷಣವಾಗಿ ಕೈಮುಗಿದು ನಮಸ್ತೆ ಅಂತ ಹೇಳಲು ದೂರದರ್ಶನದಲ್ಲಿ ಮುಖ ತೋರುವ ಜನರಿಗೆ ವಾರಗಟ್ಟಲೆ ತರಬೇತಿ ನೀಡಿದ್ದರಂತೆ. ದೇವಸ್ಥಾನಕ್ಕೆಹೋದರೆ ಅಲ್ಲಿ ವರ್ತಿಸಬೇಕಾದ ಕ್ರಮ ನಾನು ತಿಳಿದಿಲ್ಲವೆಂದ ಮೇಲೆ ಮಕ್ಕಳಿಗೆ ಎಷ್ಟು ತಿಳಿದೀತು ತೀರ್ಥ ತೆಗೆದುಕೊಳ್ಳುವುದು ಹೇಗೆ, ಆದನ್ನು ಸೇವಿಸುವುದು ಹೇಗೆ ಸೇವಿಸಿದನಂತರ ಕೈ ಒರಸಿ ಕೊಳ್ಳುವುದು ಹೇಗೆ? ದೇವರಿಗೆ ನಮಸ್ಕರಿಸುವುದು ಹೇಗೆ ಯಾವ ದೇವರಿಗೆ ಎಷ್ಟು ಪ್ರದಕ್ಷಿಣೆ ಹಾಕಬೇಕು ಎಂದೆಲ್ಲ ನಮಗೆ ಕಲಿಸುವರ್‍ಯಾರು?

ಮೂರರ ಮಗುವನ್ನು ಕಾನ್ವೆಂಟ್ ಶಾಲೆಗೆ ಕಳಿಸಿ ಆಂಗ್ಲಮಾದರಿಯ ಹಲೋ ಟಾಟಾ, ಬೈಬೈ ಗುಡ್‌ಮಾರ್ನಿಂಗ್ ಥ್ಯಾಂಕ್ಯೂ, ಸ್ಯಾರೀ, ಎಕ್ಸಕ್ಯೂಸ್ 'ಮೀ ಗಳ ಪರಿಪಾಟ ಮಾಡಿಸಿ ಖುಷಿಪಡುವ ತಂದೆ ತಾಯಿಗಳು ನಾವು ಭಾರತೀಯರು. ನಮಗೆ ನಮ್ಮದೇ ಆದ ಸಂಸ್ಕೃತಿ ಇದೆ ಎಂಬ ಸಂಗತಿ ಮರೆತಿದೆ. ಈಗಲಾದರು ನಾವು ಕಲಿತು ನಮ್ಮ ಮಕ್ಕಳಿಗೆ ನಮ್ಮ ಸಂಸ್ಕೃತಿಯ ಪಾಠ ಕಲಿಸುವುದು ಉತ್ತಮ.

---

ನುಡಿದರೆ ಮುತ್ತಿನ ಹಾರದಂತಿರಬೇಕು
ನುಡಿದರೆ ಮಾಣಿಕ್ಯದ ದೀಪ್ತಿಯಂತಿರಬೇಕು
ನುಡಿದರೆ ಸ್ಫಟಿಕದ ಶಲಾಕೆಯಂತಿರಬೇಕು
ನುಡಿದರೆ ಲಿಂಗಮೆಚ್ಚಿ ಆಹುದಹುದೆನಬೇಕು
ನುಡಿಯೊಳಗಾಗಿ ನಡೆಯದಿದ್ದರೆ ಕೂಡಲಸಂಗಮದೇವನೆಂತೊಲಿವನಯ್ಯ

- ಬಸವಣ್ಣನವರು.

# ಶಿಕ್ಷಣ ಮತ್ತು ಮಾತು

ಕರ್ಕಿ ಸುಬ್ರಾಯ ಭಟ್ಟ, ಸಹಶಿಕ್ಷಕರು, ಹಿಂದೂ ಹೈಸ್ಕೂಲ್, ಕಾರವಾರ (ಉ.

ವೈದ್ಯ ಮಾಡಿದ ತಪ್ಪು ಹೂಳಲ್ಪಡುವುದು. ವಕೀಲ ಮಾಡಿದ ತಪ್ಪು "ಹಾಕಲ್ಪಡುವುದು. ಆದರೆ ಶಿಕ್ಷಕಮಾಡಿದತಪ್ಪು ಶತಮಾನದುದ್ದಕ್ಕೂ ಪ್ರೇತ ತೆವಳುವುದು" ಎನ್ನುವ ಮಾತಿದೆ.

ಶಿಕ್ಷಕನು ತನ್ನ ವ್ಯಕ್ತಿತ್ವವನ್ನು ಬೆಳಸಿಕೊಳ್ಳಲು ಆತನ ಮಾತು ಅತ್ಯಂತ ಪ್ರ ಬೀರುವುದು. ಪ್ರಭಾವಿ ಶಿಕ್ಷಕನಾಗಲು ಮಾತು ಅತೀ ಅವಶ್ಯಕ. ಶಿಕ್ಷಕನ ಪ್ರತಿಯೊ ಮಾತು ಮಗುವಿನ ಮೇಲೆ ಪ್ರಭಾವ ಬೀರುವುದು. ಮಗುವಿಗೆ ಶಿಕ್ಷಕನ ಮಾತೇ ವಾಕ್ಯವಾಗಿರುತ್ತದೆ. ಆದರಿಂದ ಶಿಕ್ಷಕ ತನ್ನ ಮಾತಿನಲ್ಲಿ ಕೆಲವೊಂದು ಮಹ ಅಂಶವನ್ನು ಅಳವಡಿಸಿಕೊಳ್ಳ ಬೆಕಾದುದು ಅತಿ ಅವಶ್ಯ.

"ಸತ್ಯಂಬ್ರೂಯಾತ್ ಪ್ರಿಯಂ ಬ್ರೂಯಾತ್<br>
ನಬ್ರೂಯಾತ್ ಸತ್ಯಮ ಪ್ರಿಯಮ್"

ಎಂಬಂತಹ ನುಡಿಯನ್ನು ಶಿಕ್ಷಕ ಅಳವಡಿಸಿಕೊಳ್ಳಬೇಕು. ಮಾತನ್ನು ಅ ಭಾವಿಗಳು 'ಜ್ಯೋತಿರ್ಲಿಂಗ' ಎಂದು ಹೇಳಿದ್ದಾರೆ, ಹಾಗೆಯೇ ಬಸವಣ್ಣನ ಮಾತನ್ನು ಕುರಿತು ಈ ಕೆಳಗಿನಂತೆ ಹೇಳಿದ್ದಾರೆ!

ನುಡಿದರೆ ಮುತ್ತಿನ ಹಾರದಂತಿರಬೇಕು!<br>
ನುಡಿದರೆ ಮಾಣಿಕ್ಯದ ದೀಪ್ತಿಯಂತಿರ ಬೇಕು!<br>
ನುಡಿದರೆ ಸ್ಫಟಿಕದ ಶಲಾಕೆಯಂತಿರ ಬೇಕು!<br>
ನುಡಿದರೆ ಲಿಂಗ ಮೆಚ್ಚಿ ಅಹುದೆನ ಬೇಕು!

"ಮಾತೇ ಮುತ್ತು, ಮಾತೇ ಮೃತ್ಯು" ಅದಕ್ಕಾಗಿ ಶಿಕ್ಷಕನು ಈ ನೀತಿಯ ಅರಿತು ಮಾತನಾಡಬೇಕು.

ಮಾತನ್ನು ಕುರಿತು ಸರ್ವಜ್ಞನ ಕವಿಯು

"ಎದ್ದು ಮಾತಾಡದಿರು, ಎದ್ದೆದ್ದು ನಿಲ್ಲದಿರು!<br>
ಇದ್ದ ಮನುಜರನು ನೀ ಹಳಿಯದಿರು<br>
ಜಗದೊಳಿದ್ದಾಗ ನೀನು ಸರ್ವಜ್ಞ"

ಎಂದು ವಿವರಿಸಿ ಎಲ್ಲರನ್ನು ದೂಷಿಸಿ ನೀನು ದೊಡ್ಡವನಾಗದಿರು ಎಂಬ ಮಾತ ತಿಳಿಸಿಹೇಳಿ ತಾನೇ ಶ್ರೇಷ್ಟ ಎಂದು ಬೀಗದಿರುವಂತೆ ಹೇಳಿದ್ದಾನೆ ಅದಕ್ ಶಿಕ್ಷಕನು ಕೇವಲ ವಾಚಾಳಿಯಾಗದೆ ಇನ್ನೊಬ್ಬರ ಮಾತಿಗೂ ಅವಕಾಶ ಕಲ್ಪಸಬೆ

‘ಮಾತು’ ಒಂದು ಕಲೆ ಇದು ಎಲ್ಲರಿಗೆ ಸಿದ್ಧಿಸುವುದಿಲ್ಲ. ಇಂದು ಸ್ಪರ್ಧಾತ್ಮಕ ಯುಗ. ಇಲ್ಲಿ ಪ್ರತಿಯೊಂದು ಮಾತು ಪ್ರತಿಯೊಬ್ಬರ ಮೇಲೆ ಪ್ರಭಾವ ಬೀರುವದು ಹಾಗೇ ಪ್ರಭಾವ ಬೀರುವ ಮಾತುಗಾರಿಕೆಕೂಡ ಒಂದು ಕಲೆ. ಎಲ್ಲರೂ ಮಾತನಾಡಿ ದರೂ ಸಹ ಎಲ್ಲರ ಮಾತಿಗೆ ಬೆಲೆ ಬರುವದಿಲ್ಲ. ಕೆಲವೇ ಕೆಲವರು ಮಾತ್ರ ಪ್ರಭಾವ ಬೀರುವಂತೆ ಮಾತನಾಡಬಲ್ಲರು ಅದಕ್ಕೆ ಇನ್ನೊಬ್ಬರ ಮನಸ್ಸನ್ನು ಅರ್ಥಮಾಡಿಕೊ ಳ್ಳುವ “ಸೈಕಾಲಾಜಿಕಲ್ ಮೈಂಡ್” ಅತಿ ಅಗತ್ಯ ಅದಕ್ಕಾಗಿ ಶಿಕ್ಷಕ ಇಂತಹ ತಲೆಯನ್ನು ಬೆಳಸಿಕೊಳ್ಳುವದು ಅತೀ ಅವಶ್ಯಕವಾಗಿದೆ.

ಶಿಕ್ಷಕರ ಆಸ್ತಿಯೆಂದರೆ ಮಕ್ಕಳು. ಮಕ್ಕಳಿಗೆ ಮಾತನಾಡಲು ಅವಕಾಶ ಕೊಡದೆ ತಾನೇ ಸರ್ವಜ್ಞನೆಂದು ತಿಳಿದು ಶಿಕ್ಷಕನು ಮಕ್ಕಳ ಪ್ರತಿಭೆಯನ್ನು ವ್ಯಕ್ತಿತ್ವವನ್ನು ಕುಗ್ಗಿ ಸುವದು ಸೂಕ್ತವಲ್ಲ, ಯಾವ ಹುತ್ತದಲ್ಲಿ ಯಾವ ಹಾವೊ! ಹಾಗೆಯೇ ಮಕ್ಕಳಲ್ಲಿ ರುವ ಪ್ರತಿಭೆಗೆ ತಣ್ಣೀರೆರಚದೆ ಅವರ ಮಾತಿಗೂ ಅವಕಾಶ ಕಲ್ಪಿಸುವದು ಶಿಕ್ಷಕನ ಕರ್ತವ್ಯ

ಮಾತುಗಾರಿಕೆಯಲ್ಲಿ ಧ್ವನಿಯ ಏರಿಳಿತ, ಹಾವ ಭಾವವು ಪ್ರಭಾವ ಬೀರುವ- ದರಿಂದಾಗಿ ಶಿಕ್ಷಕನು ಈ ಕಲೆಯನ್ನು ರೂಢಿಸಿಕೊಳ್ಳುವದು ಅತೀ ಅವಶ್ಯ.

ಶಿಕ್ಷಕನ ವ್ಯಕ್ತಿತ್ವದ ಕನ್ನಡಿ ಎಂದರೆ “ ಮಾತು ” ಅದಕ್ಕಾಗಿ ಶಿಕ್ಷಕನು “ ತಾ ಆಡಿದ್ದೇ ವೇದ ವಾಕ್ಯ” ಎಂದು ಸಾಧಿಸದೆ ಮಕ್ಕಳ ಹಾಗೂ ಇತರರ ಮಾತಿಗೆ ಬೆಲೆ ಕೊಡಬೇಕು. “ ಮಾತರಿದವ ಜಗಳತಂದ, ಮಾತು ಬಲ್ಲವ ಮಾಣಿಕತಂದ” ಎಂಬಂತೆ ಅರಿತು ಮಾತನಾಡಬೇಕು. “ನಾಲಿಗೆ ಒಳ್ಳೆಯದಾದರೆ ನಾಡೆಲ್ಲ ಒಳೆಯದು” ಎಂಬಂತೆ ಒಳ್ಳೆಯ ಮಾತನಾಡಿ “ಮನಿ ಹೋದ್ರುಮಾತು ಉಳಿಯಬೇಕು” ಎನ್ನುವಹಾಗೆ ಮಾತನ್ನು ಉಳಿಸಿಕೊಳ್ಳಬೇಕು.

“ ಮಾತು ಆಡಿದ್ರೆ ಹೋಯ್ತು ಮುತ್ತು ಒಡೆದರೆ ಹೋಯ್ತು’ ಅದಕ್ಕಾಗಿ ಶಿಕ್ಷಕ ಮಾತನಾಡುವಾಗ ಅರಿತು ಮಾತನಾಡಬೇಕು. “ ಒಪ್ಪಿಲ್ಲದ ಮಾತು ತಪ್ಪಇಲ್ಲದ ಊಟ’ ಎರಡೂ ಒಂದೇ ಆದ್ದರಿಂದ ಮಾತಿನಲ್ಲಿ ಒಳ್ಳೆಯತನ ಇರಬೇಕು. ಅತನ ಮಾತು ‘ ಮರ್ಮ ಇಲ್ಲ ಮಾತು, ಒಡಕಗಡ್ಡಿತೂತ’ ಎಂಬಂತೆ ಇರಬಾರದು.

“ ಬೇಡಾದ ಮಾತು ಬೇವಿನಕಾಯಿಗಿಂತ ವಿಷ” ವಾದ್ದರಿಂದಲೂ “ಬರಮೂರು ದಿನ, ಮಾತು ಅನಗಾಲ’ ಆಗಿರುವದರಿಂದಲೂ ಶಿಕ್ಷಕನು ಮಾತಿನ ಮಹತ್ವ ಅರಿತು, ಹದವರಿತು, ಮಾತನಾಡಬೇಕು. “ ಮಾತು ಆಡಿದರೆ ಹೋಯ್ತು ಮುತ್ತು ಒಡೆದರೆ ಹೋಯ್ತು’ ಆದ್ದರಿಂದ ಶಿಕ್ಷಕ ಮಾತನಾಡುವ ಪೂರ್ವದಲ್ಲಿ ವಿವೇಚಿಸಿ ಯೋಚಿಸಿ ಮಾತನಾಡುವದು ಅತೀ ಅಗತ್ಯ.

# ವರತಪಸ್ವಿ

ಜಿ. ರಾಧಾದೇವಿ, ಕಾದಂಬರಿಗಾರ್ತಿ, ಬೆಸ್ತವಾರಪೇಟೆ, ರಾಯಚೂರು - 584101

ಶ್ರೀ ಧರ್ಮಸ್ಥಳದ ಮಂಜಯ್ಯ ಹೆಗಡೆ ಅವರ ಮಹಾಸಾಧನೆ ಕುರಿತು ಜಾನಪದದ ರೂಪದಲ್ಲಿ ಧಾರಾವಾಹಿಯಾಗಿ ಪರಿಚಯಮಾಡಿಕೊಟ್ಟಿದ್ದಾರೆ.

ನಮ್ಮ ಶ್ರೀ ಮಂಜಯ್ಯ ಹೆಗಡೇರು ಸುವ್ವಲಾಲಿ ಅವರು ಬಂಗಾರದಂಥೋರು ಸುವ್ವಲಾಲಿ ಹಾಲು ಉಕ್ಕಿ ಹರಿದಂತೆ ಸುವ್ವಲಾಲಿ ಅವರ ಕೀರ್ತಿ ಎಲ್ಲೆಲ್ಲು ಹರಡಿತು ಸುವ್ವಲಾಲಿ

ವಿದ್ಯಾಭ್ಯಾಸದಲ್ಲಿ ಸ್ನಾತಕೋತ್ತರ ಪದವಿ ಪಡೆಯಬೇಕು, ಚಿತ್ರಕಲೆಯನ್ನು ಒಂದು ಕಲಾಶಾಲೆಯಲ್ಲಿ ಗುರುವಿನ ಮೂಲಕ ಕಲಿಯಬೇಕು ಎಂಬ ಇವರ ಕನಸುಗಳು ನೆರವೇರಲಿಲ್ಲ, ಇದಕ್ಕೆ ಕಾರಣ ಇವರಿಗೆ ಶ್ರೀ ಕ್ಷೇತ್ರದಿಂದ ಬಂದ ಕರೆ ಚಿಕ್ಕಂದಿನ-ಲ್ಲಿಯೆ 'ಸುವ್ವಲಾಲಿ ಶ್ರೀಕ್ಷೇತ್ರಕ್ಕೆ ದತ್ತುಪುತ್ರರಾಗಿದ್ರು ಸುವ್ವಲಾಲಿ ಇಪ್ಪತ್ತೊಂಬತ್ತರ ಹರೆಯದಲ್ಲಿ ಸುವ್ವಲಾಲಿ ಶ್ರೀ ಕ್ಷೇತ್ರದಲ್ಲಿ ಪಟ್ಟಾಭಿಶೇಕವಾಯ್ತು ಸುವ್ವಲಾಲಿ

ಸಜ್ಜನರ ಕೈಗೆ ಅಧಿಕಾರ ಬಂದರೆ ಲೋಕಹಿತವಾಗುತ್ತದೆ, ಎಂಬ ಮಾತು ಶ್ರೀ ಮಂಜಯ್ಯ ಹೆಗಡೆಯವರ ವಿಷಯದಲ್ಲಿ ನಿಜವಾಯ್ತು. ಇಪ್ಪತ್ತೊಂಬತ್ತರ ಹರೆಯದಲ್ಲಿ ಶ್ರೀ ಧರ್ಮಸ್ಥಳದ ಧರ್ಮಾಧಿಕಾರಿಯಾಗಿ ಅಭಿಶಿಕ್ತರಾದ ಇವರು ಅನೇಕ ಲೋಕಕಲ್ಯಾಣ ಕಾರ್ಯಗಳನ್ನು ಮಾಡಿದರು, ಜನಹಿತಕ್ಕಾಗಿ ದುಡಿದರು.

ಮೊದಲು ಶ್ರೀ ಕ್ಷೇತ್ರದ ಅಭಿವೃದ್ಧಿ, ಅನಂತರ ಯಾತ್ರಿಕರಿಗೆ ಸೌಲಭ್ಯಗಳು ಎರಡನ್ನು ಇವರು ಯಶಸ್ವಿಯಾಗಿ, ನಿರ್ವಹಿಸಿದರು. ಆಗಿನ ದಿನಗಳಲ್ಲಿ ನೇತ್ರಾವತಿ ಹೊಳೆಯನ್ನು ದೋಣಿಯಲ್ಲಿ ಧಾಟಿ ಶ್ರೀ ಕ್ಷೇತ್ರಕ್ಕೆ ಬರಬೇಕಾಗಿತ್ತು. ನಡೆದು ಬರುವ ನಾಲ್ಕೈದು ಮೈಲಿಯಾ ಕಾಡು ಮೇಡುಗಳು, ಮಳೆಗಾಲದಲ್ಲಿ ಪ್ರವಾಹ ಬಂದಾಗ ಯಾತ್ರಿಕರು ನದಿ ದಾಟಲು ತುಂಬ ಶ್ರಮಪಡಬೇಕಾಗಿತ್ತು. ಕಾಡಿನಂಥಾ ಎದಿರು ದಡದಲ್ಲಿ ಪ್ರವಾಹ ಇಳಿಮುಖ ಆಗುವವರೆಗೆ ಒಂದೆರೆಡು ದಿನ ಕಾಯಬೇಕಿತ್ತು, ಶ್ರೀ ಮಂಜಯ್ಯ ಹೆಗಡೆಯವರು ಇದನೆಲ್ಲಾ ತಪ್ಪಿಸಿ ಕೆಲವು ಸೌಲಭ್ಯ ಮಾಡಿದರು.

ನೇತ್ರಾವತಿಗೆ ಸೇತುವೆ ಕಟ್ಟಿ ಸುವ್ವಲಾಲಿ
ಯಾತ್ರಿಕರಿಗೆ ಅನುಕೂಲವಾಯ್ತು ಸುವ್ವಲಾಲಿ
ವೈದಿಕ ಬ್ರಾಹ್ಮಣರ ಕರೆಸಿ ಸುವ್ವಲಾಲಿ
ಶ್ರೀದೈವಕ್ಕೆ ಹೊತ್ತು ಹೊತ್ತಿಗೆ ಹೊಸಪೂಜೆ ಸುವ್ವಲಾಲಿ

ಮಹಾಕ್ಷೇತ್ರಗಳಲ್ಲಿ ವಿಗ್ರಹಗಳಲ್ಲಿ ಭಗವಂತ ಪೂರ್ಣಾಂಶನಾಗಿ ವಿಜೃಂಭಿಸುತ್ತಾನೆ. ಆ ದೈವಿ ಆವಾಹನೆ ಸಂಪೂರ್ಣವಾಗಿ ಪ್ರಸನ್ನೀಕರಿಸಿಕೊಳ್ಳಬೇಕಾದರೆ ಹೊತ್ತು ಹೊತ್ತಿಗೆ ಮಂತ್ರೋಕ್ತ ಪೂಜೆಗಳು ವಿಶೇಷ ನೈವೇದ್ಯಗಳು ಹೊಸ ಹೊಸ ಉತ್ಸವಗಳು ಹಮ್ಮಿಕೊಳ್ಳಬೇಕು.

ದೈವಿ ಸಾಕ್ಷಾತ್ಕಾರ ಪೂರ್ಣವಾಗಿ ವಿಜೃಂಭಿಸಿದರೆ ಮಾನವರ ಎಲ್ಲಾ ಅಭೀಷ್ಟಗಳು ನೆರವೇರುತ್ತವೆ, ದೇವರ ಮೇಲೆ ಸಾಮಾನ್ಯ ಮಾನವರಿಗೂ ನಂಬಿಕೆ ಹುಟ್ಟುತ್ತದೆ, ಹೀಗೆ ಯೋಚಿಸಿ ಶ್ರೀ ಮಂಜಯ್ಯ ಹೆಗ್ಗಡೆಯವರು ವೇದ ಮಂತ್ರಗಳಲ್ಲಿ ಚೆನ್ನಾಗಿ ಪರಿಣತಿ ಪಡೆದ ಅನೇಕ ಬ್ರಾಹ್ಮಣರನ್ನು ಶ್ರೀ ಕ್ಷೇತ್ರಕ್ಕೆ ಕರೆಸಿಕೊಂಡರು ಅವರಿಂದ ಶಾಸ್ತ್ರೋಕ್ತ ಪೂಜೆ, ಬ್ರಾಹ್ಮಣ ವಟುಗಳಿಗೆ ವೇದ ಮಂತ್ರ ಕಲಿಯುವ ಏರ್ಪಾಟು ಮಾಡಿದರು.

ಆಧುನಿಕ ಸೌಲಭ್ಯ ಉಳ್ಳ ಹೊಸ ಹೊಸ ಛತ್ರಗಳು ಯಾತ್ರಿಕರಿಗೆ ವಸತಿಗಳಾದವು ಬಂದವರಿಗೆಲ್ಲಾ ರುಚಿಯಾದ-ಶುಚಿಯಾದ ಊಟಾ, ಇದೆಲ್ಲ ಇವರ ಕಾಲದಲ್ಲಿ ಕೈಗೊಂಡ ಕಾರ್ಯಗಳು. ದೇವರನ್ನು ಪೂಜಿಸಿ, ತಮ್ಮ ತೊಂದರೆ ಹೇಳಿಕೊಂಡು, ಜನ ಕಾಣಿಕೆಕಟ್ಟುತ್ತಿದ್ದರು, ತಮ್ಮ ತೊಂದರೆ ಪರಿಹಾರವಾದಾಗ, ತಮ್ಮ ಅಭೀಷ್ಟ ಪೂರ್ತಿ ಆದಾಗ ಮತ್ತೆ ಬಂದು ಕಾಣಿಕೆ ಸಲ್ಲಿಸುತ್ತಿದ್ದರು, ಅವ್ಯಕ್ತವಾಗಿ ಜನರ ಮನದಲ್ಲಿ ತುಂಬಿದ ಭಕ್ತಿಗೆ ಸ್ಪಂಧಿಸಲು ಶ್ರೀ ಕ್ಷೇತ್ರದ ಮಂಜುನಾಥನಿಗೆ, ತಮ್ಮ ಭಾವನೆಗಳನ್ನು ತೂಂಡಿ ಕೊಂಡವರಿಗೆ ಕತ್ತಲಿನಿಂದ ಬೆಳಕಿನತ್ತ ದಾರಿ ತೋರಲು ಅಸತ್ಯದಿಂದ ಸತ್ಯದ ಕಡೆಗೆ ದಾರಿ ತೋರಲು ಅಧರ್ಮ ತೊರೆದು—ಧರ್ಮದ ದಾರಿಗೆ ಬರಲು ಶ್ರೀ ಮಂಜಯ್ಯ ಹೆಗಡೆಯವರು ಇದ್ದರು,

ಜನರ ಸಂಕಷ್ಟಗಳ ಬಗ್ಗೆ ಅವರೊಡನೆ ವಿಚಾರ ಮಾಡಿ, ಧರ್ಮದ ಪಥದಲ್ಲಿ ನಡೆಯಿರಿ ಧರ್ಮ ನಿಮ್ಮನ್ನು ರಕ್ಷಿಸುತ್ತದೆ, ದೈವಭಕ್ತಿ ನಿಮ್ಮ ಕುಟುಂಬದ ರಕ್ಷಕವಚವಾಗುತ್ತದೆ ಎಂಬುದನ್ನು ಉದಾಹರಣೆಗಳ ಮೂಲಕ ವಿವರಿಸಿ ಜನರ ಅಜ್ಞಾನ ಪರಿಹರಿಸಿದರು.

ಇವರ ಕಾಲದಲ್ಲಿ ಸಾಮಾನ್ಯ ಜನರು ಸಹ ಧರ್ಮ ಪರಿಪಾಲನೆ, ದೈವಭಕ್ತಿಯಲ್ಲಿ ಹೊಸ ಬೆಳಕು ಕಂಡುಕೊಂಡರು, ಸಂಸಾರ ಪರಿಪಾಲನೆಯ ಜೊತೆಜೊತೆಗೆ ದೇವರು, ಧರ್ಮದತ್ತ ಹೇಗೆ ಮನಸು ತೊಡಗಿಸಬೇಕೆಂದು ಕಲಿತರು.

ದೂರದೂರದ ಊರುಗಳಿಗೆ, ಹಳ್ಳಿಗಳಿಗೆ ಧರ್ಮ, ದೇವರ ಬಗ್ಗೆ ಚೆನ್ನಾಗಿ ತಿಳಿದ, ಉಪನ್ಯಾಸಕಾರರನ್ನು ಕಳಿಸಿ, ಜನರಿಗೆ ಧರ್ಮದ ಸ್ವರೂಪಾ-ದೇವರ ಮಹಾನ್ ತತ್ವಗಳ ಬಗೆ ತಿಳಿಯಲು ಅವಕಾಶ ಮಾಡಿಕೊಡುತ್ತಿದ್ದರು, ಈ ವಿದ್ವಾಂಸರಿಗೆ ತಾವು ಸಂಭಾವನೆ ಕೊಡುತ್ತಿದ್ದರು,

ಗುರುವಿಂಗೆ ಗುರುವಾಗಿ ಸುವ್ವಲಾಲಿ
ಜನರಿಗೆ ಅರಿವು ತೋರಿದರೊ ಸುವ್ವಲಾಲಿ
ಸುರಗಿ ಹೂವಿನಂತೆ ಪರಮಳಿಸಿ ಸುವ್ವಲಾಲಿ
ವರತಪಸ್ವಿ ಶ್ರೀ ಮಂಜಯ ಹೆಗಡೇರು ಬಾಳಿದ್ರೊ ಸುವ್ವಲಾಲಿ,

# ವಿದ್ಯಾರ್ಥಿ ಜೀವನದ ಬೆಳಕು ಸರಣಿ. ಲೇಖನ–೯

ಬಿ. ಎಸ್. ಕೃಷ್ಣಮೂರ್ತಿ ನಂ 5. ಸೀತಾ ವಿಲಾಸ್ ರಸ್ತೆ. ಮೈಸೂರು – 570 024

**ಜೀವನದ ಮುಖ್ಯಾಧಾರ:** ಬಡವನಾಗಲಿ, ಬಲ್ಲಿದನಾಗಲಿ ಅವನ ಹಾನಿ, ವೃದ್ಧಿಗೆ ಮೂಲಬಿಂದು ಆರೋಗ್ಯ! ಆರೋಗ್ಯವೇ ನಿಜವಾದಭಾಗ್ಯ, ಆದರಲ್ಲೂ ವಿದ್ಯಾರ್ಥಿಗಳು ಗಮನಿಸಬೇಕಾದ್ದು ಆರೋಗ್ಯ! ಇದು ಇಲ್ಲವಾದರೆ ವಿದ್ಯಾಭ್ಯಾಸದ ಪರಿಣಾಮವು ಕುಂದುತ್ತದೆ. ಸರ್ವತೋಮುಖ ವೃದ್ಧಿಗೆ ಆರೋಗ್ಯವು ಅಡಿಗಲ್ಲೆನಿಸುತ್ತದೆ. ಅದಕ್ಕಾಗಿ ಓದಿನ ವೇಳೆಯಲ್ಲಿ ವ್ಯಾಯಾಮವು ಅತ್ಯವಶ್ಯಕ.

ನಿಮ್ಮ ಪ್ರತಿಕಾರ್ಯಗಳಿಗೂ ಕಾಲವನ್ನು ನಿಗದಿಡಿಸಿಕೊಂಡು ಅದನ್ನು ಚಾಚೂ ತಪ್ಪದೆ ಕಾರ್ಯನಿರ್ವಹಿಸಬೇಕು. ಇದರಿಂದ ಹಿಡಿದ ಕೆಲಸಗಳೆಲ್ಲಾ ಸಾಂಗವಾಗಿ ನೆರವೇರುತ್ತವೆ. ವ್ಯಾಯಾಮಕ್ಕೆ ವೇಳೆ ಗೊತ್ತುಪಡಿಸಿ ಸಾಧನೆ ಮಾಡುವುದುಉತ್ತಮ.

ವ್ಯಾಯಾಮದಿಂದ ತಿಂದ ಆಹಾರವು ಕರಗಿ ರಕ್ತಗತವಾಗುವುದಲ್ಲದೆ ಮುಂದೆ ಮಾಡಬೇಕಾದ ಕಾರ್ಯಗಳಿಗೆ ಹೊಸ ಹುರುಪುಬರುತ್ತದೆ. ಮಾನಸಿಕ ನೆಮ್ಮದಿ ಸಂತೋಷ ಇಮ್ಮಡಿಸುತ್ತದೆ. ದೇಹದ ಸ್ನಾಯುಗಳು ಬಲಿಷ್ಠವಾಗುವುವು. ಶರೀರದಲ್ಲಿ ಶೇಖರವಾದ ಕಶ್ಮಲಗಳು ಚರ್ಮದ ರಂಧ್ರಗಳಿಂದ ಬೆವರಿನ ರೂಪದಲ್ಲಿ ಹೊರಗೆ ಚೆಲ್ಲಲ್ಪಡುತ್ತವೆ.

ವ್ಯಾಯಾಮಗಳು ಅನೇಕ ವಿಧಗಳಿವೆಯೆಂಬುದು ಎಲ್ಲರಿಗೂ ತಿಳಿದಿರುವ ಅಂಶ. ಈಗಿನ ಕ್ರೀಡೆಗಳು ಮುಖ್ಯವಾಗಿ ಕಾಲು ಚೆಂಡಾಟ ಕ್ರಿಕೇಟ್, ಟೆನ್ನಿಸ್, ಬ್ಯಾಡ್ಮಿಂಟನ್ ಪೋಲ್ಲೋ, ಈಜುವುದು, ಜಿಮ್‌ನಾಷಿಯಮ್ ಇವು ಮುಖ್ಯ. ಈಗೀಗ ಹೆಚ್ಚಾಗಿ ಯೋಗಾಸನ, ಕರಾಟೆಗಳೂ ಹೆಚ್ಚು ಜನರನ್ನು ಆಕರ್ಷಿಸುತ್ತಿವೆ. ಸ್ಯಾಂಡೋಗಳಂತೆ ಅಂಗಸೌಷ್ಟವವುಳ್ಳವರನ್ನು ಮೆಚ್ಚುತ್ತಾರೆ. ಯೋಗಾಸನ ವಿಷಯವನ್ನು ಹೇಳುವುದಾದರೆ ದೇಹದಲ್ಲಿ ನಡೆಯುವ ಅವಯುವಗಳಿಗೆ ಸರ್ವಸಿದ್ಧಿಕೊಡುವ ಅಮೃತವೆನ್ನಬಹುದು. ಏಕೆಂದರೆ ಆಸನಗಳಲ್ಲಿ ಅನೇಕ ಬಗೆಗಳುಂಟು ಒಂದೊಂದು ಆಸನವನ್ನು ಮಾಡುವುದರಿಂದ ಒಂದೊಂದು ಬಗೆ ವ್ಯಾಧಿಯನ್ನು ಬುಡಮಟ್ಟ ಕಿತ್ತುಸೆಯುವ ಸಾಮರ್ಥ್ಯವಿದೆ. ವಿದ್ಯಾರ್ಥಿಗಳು ಈ ಆಸನಗಳ ಸರ್ವಪ್ರಯೋಗಗಳನ್ನು ನಡೆಸಿ ತಮ್ಮ ದೇಹ ದೊಳಗಿನ ವ್ಯಾಧಿಗಳನ್ನು ನಿವೃತ್ತಿಮಾಡಿಕೊಂಡು ವೈದ್ಯರನ್ನು ಹುಡಿಕಿ ಕೊಂಡು ಅಲೆಯುವ ಪರಿಪಾಠ ತಪ್ಪಿ, ವೈದ್ಯರಿಗಾಗಿ ತೆರುವ ಹಣ ಉಳಿತಾಯವಾಗುತ್ತದೆ.

ಇನ್ನು ಕರಾಟೆ ವಿಷಯ ಹೇಳುವುದಾದರೆ ಇದನ್ನು ಅಭ್ಯಾಸ ಮಾಡದವರು ತಮ್ಮ ಎದುರಾಳಿಗಳಿಂದ ತಾವು ಪ್ರಾಣಾಪಾಯವನ್ನು ತಪ್ಪಿಸಿಕೊಳ್ಳಬಹುದು. ಈ

ಎಲ್ಲಾ ಸಾಧನೆಗಳಿಗೂ ಅವರವರಿಗೆ ಉಚಿತವಾದ ಕ್ರೀಡೆಗಳನ್ನು ಆರಿಸಿಕೊಳ್ಳಬಹುದು ವ್ಯಾಸಂಗದ ವೇಳೆ ಮುಗಿದ ಮೇಲೆ ಈ ವ್ಯಾಯಮಗಳನ್ನು ನಿಶ್ಚಿತ ಗೊಂಡಂತೆ ವಿದ್ಯುಕ್ತ ವಾಗಿ ನಡಿಸಿ ದೇಹಾರೋಗ್ಯವನ್ನ ಕಾಪಡಿಕೊಳ್ಳಬಹುದು. ಪ್ರತಿ ವ್ಯಾಯಾಮ ಕ್ರೀಡೆ ಗಳಲ್ಲೂ ತಮ್ಮ ಗುರಿ ಶಿಸ್ತು ಮತ್ತು ವೇಳಾಕ್ರಮಗಳನ್ನು ಪಾಲಿಸಿ ಕೊಂಡು ನಡೆಯು ವುದು ಉತ್ತಮ ಮಾರ್ಗ

ಯಾರಿಗೇ ಆಗಲಿ ಬೇಕಾದಷ್ಟು ಧನ, ಭೂಮಿ, ಮನೆ ಮಠ, ಹೆಂಡತಿ, ಮಕ್ಕಳು, ದಾಸ ದಾಸೀಯ ಜನರಿದ್ದಾಗ್ಯೂ ಆರೋಗ್ಯ ಭಾಗ್ಯ ಇರದಿದ್ದರೆ, ಸುಖ ಶಾಂತಿಗಳು ಇರಲಾರವು. ಸರ್ವಕಾಲಕ್ಕೂ, ಸರ್ವಜಯಗಳಿಗೂ ಆರೋಗ್ಯದ ಪಾತ್ರ ಮುಖ್ಯವೆನಿಸಿದೆ. ಹೀಗಾಗಿ ಸಂತೋಷ ಪ್ರವೃತ್ತಿಯ ಸ್ವಭಾವ ಸ್ಥಿರವಾಗಿರುತ್ತದೆ.

ಹಿಂದಿನ ಕಾಲದಲ್ಲಿ ನಮ್ಮ ಪೂರ್ವಿಕರು ದೃಢಾಂಗರಾಗಿದ್ದುದರಿಂದ, ತಮ್ಮ ಕೆಲಸಗಳಿಗೆ ಸೇವಕರನ್ನು ನೇಮಿಸದೆ ತಾವೇ ಮಾಡಿಕೊಳ್ಳುತ್ತಿದ್ದರು. ಇವರ ಆಯು ಸ್ಸು ಸಹ ಹೆಚ್ಚಾಗಿಯೇ ಇರುತ್ತಿತ್ತು. ಆ ಹಿರಿಯರು ಕಾಫಿ, ಟೀಗಳನ್ನು ಸೇವಿಸು ತ್ತಿರಲಿಲ್ಲ. ಕಾಲವರಿತು ಆಹಾರ ಸೇವಿಸುತ್ತಾ, ದೇವತಾ ಕಾರ್ಯಗಳಿಂದ ಮನಸ್ಸನ್ನು ಹತೋಟಿಯಲ್ಲಿ ಇಟ್ಟುಕೊಳ್ಳುತ್ತಿದ್ದರು.

ಆದುದರಿಂದ ಮೇಲೆ ವಿವರಿಸಿರುವ ವಿಷಯುಗಳನ್ನು ವಿದ್ಯಾರ್ಥಿಗಳು ಗಮನಿಸಿ, ತಮ್ಮ ಏಳಿಗೆಗೆ ಸಾಧನವಾದ ಆರೋಗ್ಯದ ಕಡೆ ಲಕ್ಷ್ಯ ಕೊಟ್ಟು ಕೀರ್ತಿಶಾಲಿಗಳಾ ಗುವ ಮಾರ್ಗ ಅನುಸರಿಸಬೇಕು.

‡‡ ‡‡ ‡‡

ಕೊಲ್ಲುವವನೇ ಮಾದಿಗ, ಹೊಲಸು ತಿಂಬುವನೇ ಹೊಲೆಯ
ಕುಲವೇನೋ ಆವಂದಿರ ಕುಲವೇನೋ
ಸಕಲ ಜೀವಾತ್ಮರಿಗೆ ಲೇಸನೇ ಬಯಸುವ
ನಮ್ಮ ಕೂಡಲಸಂಗನ ಶರಣರೇ ಕುಲಜರು

– ಬಸವಣ್ಣನವರು.

# ಭಿಕ್ಷುಕರ ಹಳ್ಳಿ—ಇನ್ನಾದರೂ ಬದಲಾದೀತೆ!

ಬಿ. ಸುಬ್ರಾಯ ಅಡಿಗ, ನಿವೃತ್ತ ಅಧ್ಯಾಪಕರು, ಸಂಡೂರು, ಬಳ್ಳಾರಿ-ಜಿಲ್ಲೆ.

ಗೋಂಡಾ ಜಿಲ್ಲೆಯ ಟಿಕರಿಯಾ ರಸ್ತೆಯಿಂದ ಸುಮಾರು ೨ ಕಿಲೋಮೀಟರ್ ದೂರದಲ್ಲಿದೆ. ಏರುತಗ್ಗಾದ ನೆಲದಲ್ಲಿರುವ ಇಲ್ಲಿಯ ಮನೆಗಳಲ್ಲಿ ಜೋಗೀಪರಿವಾರಗಳುವಾಸಿಸುತ್ತಿವೆ. ೨೦೦ ಪರಿವಾಗಳಲ್ಲಿ ಸುಮಾರು ೧೦೦೦ ಜನರಿದ್ದಾರೆ. ಭಿಕ್ಷೆಬೇಡುವುದೇ ಇವರ ಮುಖ್ಯ ಉದ್ಯೋಗ. ಇತ್ತೀಚೆಗೆ ಕೆಲವರು ತಮ್ಮ ಗಳಿಕೆಯಿಂದ ಪಕ್ಕದ ಹಳ್ಳಿಯಲ್ಲಿ ಒಂದಿಷ್ಟು ಹೊಲ ಕೊಂಡಿರುವರಾದರೂ, ಭಿಕ್ಷೆ ಬೇಡುವ ಪರಂಪರಾಗತ ಉದ್ಯೋಗ ಬಿಟ್ಟಿಲ್ಲ. ಭಿಕ್ಷೆಯಿಂದ ದೊರೆಯುವ ಹಣದ ಆಕರ್ಷಣೆಯೇ ಇದಕ್ಕೆ ಕಾರಣವಿದ್ದೀತು. ಏಕೆಂದರೆ ಹಳ್ಳಿಯ ಹೆಚ್ಚಿನ ಮನೆಗಳ ಆರ್ಥಿಕಸ್ಥಿತಿ ಚೆನ್ನಾಗಿದೆ. ಕೆಲವರಂತೂ ಒಳ್ಳೆಯ ಮನೆಗಳನ್ನು ಕಟ್ಟಿಕೊಂಡಿದ್ದಾರೆ.

ಈಜೋಗಿಗಳು ಭಿಕ್ಷೆಯೆತ್ತುವ ಕ್ರಮವೂ ವಿಚಿತ್ರವಾದುದು. ಇವರು ತಂಡ ಕಟ್ಟಿಕೊಂಡು ಹೊರಡುತ್ತಾರೆ. ಬಿಹಾರ,ಪಶ್ಚಿಮಬಂಗಾಳ, ಅಸ್ಸಾಂಮ್ ಮೊದಲಾದ ಪ್ರದೇಶಗಳಿಗೆ ಹೋಗಿ ಭಿಕ್ಷೆ ಬೇಡುತ್ತಾರೆ. ಕೊರಳಿನಿಂದ ಕಾಲಿನವರೆಗೆ ಜೋತಾಡುವ ಕಿತ್ತಳೆ ಬಣ್ಣದ ಉಡುಪು, ತಲೆಯಮೇಲೆ ಅದೇಬಣ್ಣದಟೊಪ್ಪಿ ಕೈಯಲ್ಲೊಂದು ಸಾರಂಗಿ ಈ ವೇಷದಲ್ಲಿ ೧೦-೧೨ ಜನ ಭಜನೆ ಮಾಡುತ್ತ ಹೊರಟರೆಂದರೆ ಅವರು ಟಿಕರಿಯಾದ ಜೋಗಿಗಳೆಂದೇ ಅರ್ಥ.

ಇವರು ಜನರ ಕಣ್ಣಿಗೆ ಮಣ್ಣೆರಚಲು ಸಾಧುವೇಷವನ್ನು ಧರಿಸುತ್ತಾರೆ: ಒಬ್ಬ ಸಾಧುವಾದರೆ, ಉಳಿದವರು ಅವನ ಶಿಷ್ಯರಾಗಿ' ಅವನ ಮಹಿಮೆಯನ್ನು ಕೊಂಡಾಡುತ್ತ ಹೋಗುತ್ತಾರೆ.

ಭಿಕ್ಷೆಬೇಡುವ ತಮ್ಮ ಪರಂಪರಾಗತ ಕ್ರಮವನ್ನು ಈ ಜನ ಸರ್ವಥಾಬಿಡಲೊಪ್ಪರು ಇದರಿಂದ ಇವರಿಗೆ ಲಾಭವೇ ಲಾಭ. ಭಿಕ್ಷೆಗೆ ಊರುಬಿಟ್ಟು ಹೊರಡುವಾಗ ತುಂಬಾ ಕೃಶರಾಗಿದ್ದವರು ಮನೆಗೆ ಮರಳುವಾಗ ದಪ್ಪವಾಗುತ್ತಾರೆ. ಪರವೂರಲ್ಲಿದ್ದಾಗಲೂ ಮನೆಗೆ ಹಣಕಳಿಸುತ್ತಾರೆ. ಇದಕ್ಕೆ ಬದಲು ಮುಂಜಾವಿನಿಂದ ಸಂಜೆಯವರಗೆ ಬೆವರು ಹರಿಸಿದರೂ ತಿಂಗಳಿಗೆ ೨೦೦ ರೂಪಾಯಿಗಿಂತ ಹೆಚ್ಚು ಬರುವಂತಿಲ್ಲ. ಆದರೆ ಈ ಉದ್ಯೋಗದಲ್ಲಿ ಕಷ್ಟವೇ ಇಲ್ಲ. ಕೈತುಂಬ ಹಣ! ಎಂತಲೇ ಜೋಗಿ ಪರಿವಾರದ ಮಹಿಳೆಯರಿಗೂ ಇದರಲ್ಲಿ ಆಸಕ್ತಿ ತಮ್ಮ ೧೨-೧೩ ವರ್ಷದ ಹುಡುಗರನ್ನೂ ತಂಡದೊಟ್ಟಿಗೆ ಕಳಿಸಲು ಮುಂದಾಗುತ್ತಾರೆ. ಪರದೇಶಕ್ಕೆ ಹೋಗುವ ತಮ್ಮ 'ಪತಿ'ಯನ್ನು ಕಣ್ಣೀರ ತುಂಬಿ ಅಲ್ಲ ನಗುನಗುತ್ತ ಕಳುಹಿಸುತ್ತಾರೆ!

ಆದರೆ ತುಂಬಾ ಶಾಂತಿಯಲ್ಲಿ ಸಾಗುತಿದ್ದ ಜೋಗಿಯರ ಜೀವನದಲ್ಲಿ ಇತ್ತೀಚೆಗೆ ಒಮ್ಮೆಲೇ ವಿಸ್ಫೋಟ ಉಂಟಾಯಿತು. ಹಳ್ಳಿಯ ಮೂವರು ಹುಡುಗರು ತಮ್ಮ ಮದರಸಾ (ಉರ್ದೂಶಾಲೆ)ದ ತರುಣ ಮೌಲ್ವಿಯಜತೆ ಎಲ್ಲೋ ಹೊರಟು ಹೋದರು ಇದು ತರುಣತರುಣಿಯರ ಪಲಾಯನವಲ್ಲ- ಆದರಿಂದ ಪ್ರೇಮಪ್ರಕರಣವಲ್ಲವೆಂದು ಸಮಾಧಾನಪಟ್ಟುಕೊಳ್ಳಬಹುದಾರೂ ಈಊರಲ್ಲಿ ಇಂಥ ಘಟನೆ ಹಿಂದೆಂದೂ ನಡೆದಿರಲಿಲ್ಲ. ಮೌಲ್ವಿ ಆಧುನಿಕವಿಚಾರದವನಿದ್ದ. ಮಕ್ಕಳಿಗೆ ಸ್ವಾವಲಂಬನೆಯ ಪಾಠ ಹೇಳುತ್ತಿದ್ದ. ಮಕ್ಕಳ ಮಾಯವಾಗುತ್ತಲೇ ಗಾಬರಿಯಾದ ಮನೆಯವರು ಠಾಣೆಗೆ

ದೂರಿತ್ತರು ಪೊಲ್ಲೀಸಮನೆಯಲ್ಲಿ ವಿಚಾರಿಸಿ, ಅವನ ಸಂಬಂಧಿಕನೊಬ್ಬ ಬೊಂಬಾಯಿ ಯಲ್ಲಿದ್ದಾನೆಂದು ತಿಳಿದು ಅಲ್ಲಿಯ ವಿಳಾಸ ಪಡೆದರು. ಬೊಂಬಾಯಿಗೆ ಹೋಗಿ ವಿಚಾರಿಸಿದಾಗ, ಆ ಹುಡುಗರು ಸಿಕ್ಕರು. ಅವರನ್ನೇ ಮನೆಗೆ ಕರೆತರಲಾಯಿತು ತಮ್ಮನ್ನು ಪೊಲ್ಲೀ ಮೋಸದಿಂದ ಕರೆದೊಯ್ದಿರಲಿಲ್ಲವೆಂದೂ, ತಾವೇ ಏನಾದರೂ ಉದ್ಯೋಗ ಮಾಡಲೆಂದು ಅಲ್ಲಿಗೆ ಅವರ ಜತೆ ಹೋದೆವೆಂದೂ ಹೇಳಿದರವರು.

ಹಳ್ಳಿಯವರಿಗೆ ಈ ಘಟನೆ ಒಗ್ಗಲಿಲ್ಲವೆಂಬುದು ನಿಜ. ಲಾಭದಾಯಕ ಪರಂಪರೆಯನ್ನು ತೊರೆದು ಹೊಸ ಹಾದಿಹಿಡಿಯಲು ಅವರು ಖಂಡಿತಒಪ್ಪಲಾರರು. ಆದರೆ ವಿಚಾರವಂತ ಆಧುನಿಕ ಪೀಳಿಗೆ ಬದುಕಿನ ಸಂಘರ್ಷದಲ್ಲಿ ಪುಡಿಪುಡಿಯಾದರು. ಭಿಕ್ಷೆ ಬೇಡುವ ಹೀನಾಯತನಕ್ಕೆ ಖಂಡಿತ ಒಪ್ಪಲಾರದು. ಆರ್ಥಿಕವಾಗಿ ತಾವು ಉತ್ತಮವಾಗಿದ್ದರೂ ಭಿಕ್ಷೆಬೇಡುವುದು ನಾಚಿಕೆಗೇಡೆಂದು ತರುಣ ಪೀಳಿಗೆ ಭಾವಿಸುವುದು. ಪರಂಪರೆಯನ್ನು ಮುಂದುವರಿಸಲು ಅದು ಖಂಡಿತ ನಿರಾಕರಿಸುವುದು.

"ಭಿಕ್ಷೆಬೇಡುವುದು ತುಂಬ ಕೊಳಕು. ನಾನಿದನ್ನು ಮಾಡಲಾರೆ" ಎಂದು ಆ ಹುಡುಗರಲ್ಲೊಬ್ಬ ನಿರ್ಧಾರಪೂರ್ವಕ ಹೇಳಿದುದು ಭವಿಷ್ಯದ ಶುಭ ಸಂಕೇತ.

ಇನ್ನಾದರೂ ಈ ಹಳ್ಳಿ ಬದಲಾದೀತೆ? (ಹಿಂದಿಯಿಂದ)

---

ಸೆಳೆ ಸಂಚು–೧

ನಂದಕಿಶೋರ

ಟ್ರೇಡರ್ ಹಾರ್ನ ಎಂದು ಪ್ರಸಿದ್ಧನಾದ ಅಲ್ಫ್ರೆಡ್ ಅಲೋಸಿಸ್ ಸ್ಮಿತನು ದಕ್ಷಿಣ ಆಫ್ರಿಕಾದ ದುರ್ಗಮ ಅರಣ್ಯದಲ್ಲಿ ಸಂಚರಿಸಿ ಕ್ರೂರಮೃಗಗಳ ಕೈಯಲ್ಲಿ ಸಿಕ್ಕಿಪಾರಾದ ತನ್ನ ಅನುಭವಗಳನ್ನು ಗ್ರಂಥರೂಪದಲ್ಲಿ ಹೊರಗೆಡೆವಿದನು. ಅವನ ಪುಸ್ತಕ ಅಮೆರಿಕಾದ ಸಂಯುಕ್ತ ಸಂಸ್ಥಾನಗಳಲ್ಲೇ 400,000 ವರೆಗೂ ಮಾರಾಟವಾದವು. ಬ್ರಿಟನ್ನಿನಲ್ಲಿ ಅದೇ ರೀತಿ ಜನಕೊಂಡು ಓದಿದರು. ಅಮೆರಿಕಾದಲ್ಲಿ ಈ ಮಾರಾಟದ ಬಿರುಸನ್ನು ತಡೆಗಟ್ಟಲು ಯಾರೋ ಟೇಡರ್‌ಹಾರ್ನ ಒಬ್ಬ ಕಲ್ಪಿತ ಪುರುಷನೆಂದೂ ಅವನ ಕೃತಿ ಕವಿಕಲ್ಪನೆಯೆಂದೂ ಸುದ್ದಿ ಎಬ್ಬಿಸಿಬಿಟ್ಟರು. ಪುಸ್ತಕದ ಮಾರಾಟ ತಗ್ಗಿತು. ಪ್ರಕಟನಕಾರನ ಹೆಸರು ಕೆಟ್ಟಿತು. ಸತ್ಯವನ್ನು ಬಯಲಿಗೆಳೆಯಲು ಇವನಿಗೆ ಅಮೆರಿಕಾಕ್ಕೆ ಬರುವಂತೆ ಆಮಂತ್ರಣ ಬಂದಿತು. ಟ್ರೇಡರ್ ಹಾರ್ನ್ ಹೊರಟ. ಅಮೆರಿಕಾದ ಕಡಲ ತೀರದಲ್ಲೇ ಅವನಿಗೆ ಅದ್ಭುತ ಸ್ವಾಗತ ಸಿಕ್ಕಿತು. ಕ್ಲಬ್‌ಗಳಲ್ಲಿ' ಮೀಟಿಂಗುಗಳಲ್ಲಿ ಜನ ಅವನನ್ನು ನೋಡಲು ಅಸಂಖ್ಯಾತವಾಗಿ ನೆರೆದರು.

ಒಂದು ದಿನ ಟೀಪಾರ್ಟಿಯೊಂದರಲ್ಲಿ (Trade Horn) ಕುಳಿತಿದ್ದಾಗ, ಆಗಂತುಕನೊಬ್ಬನು ಎದ್ದುನಿಂತು 'ನೀನು ಸಿಂಹದ ಸಂಗಡ ಹೋರಾಡಿದೆನೆಂದು ಬರೆದಿರುವುದು ಸುಳ್ಳಲ್ಲವೇ, ಎಂದ. ಗಡ್ಡ ನೀವಿಕೊಳ್ಳುತ್ತ ಮುದುಕ ಎದ್ದುನಿಂತು 'ಹಾಗೋ' ಎಂದು ತಾನು ಧರಿಸಿದ್ದ ಕೋಟುಶರಟುಗಳನ್ನು ಒಂದೊಂದಾಗಿ ಸೊಂಟದವರೆಗೂ ಕಳಚಿ ಬೆತ್ತಲೆ ನಿಂತ. ಬೆನ್ನಿನ ಮೇಲೆ ಸೊಂಟದ ತನಕ ಆಸ್ಟ್ರೇಲಿಯ ಭೂಪಟದ ಆಕೃತಿಯಲ್ಲಿ ಸಿಂಹ ತನ್ನ ನಖಗಳಿಂದ ಅವನ ಬೆನ್ನಿನಭಾಗವನ್ನು ಸಿಗಿದಿದ್ದ ಗುರುತಿನ ಮಾಗಿದ ಕಲೆ ಎದ್ದುಕಾಣಿಸಿತು. ನೋಡಿದ ಜನ ಬೆಪ್ಪಾದರು. ಆಗಂತಕನು ನಾಚಿಸುಮ್ಮನಾದನು.

Alfred Aloysius Smith Trade Horn (1849–1931)

# ಗ್ರಾಮಾಂತರ ಬಸವ ಜಯಂತಿ–263

ಹೆಚ್. ವಿ. ವೀರಭದ್ರಯ್ಯ.

ಆತ್ಮೀಯ ಶರಣಬಂಧು,

ದಿನಾಂಕ 5-5-1991 ರಂದು ದೊಡ್ಡಬಳ್ಳಾಪುರ ತಾಲ್ಲೂಕು ದೊಡ್ಡಬೆಳುವಂಗ ಲದಲ್ಲಿ ಬಸವ ಜಯಂತಿ ಆಚರಣೆ. ಮೂರನೆಯ ಬಾರಿ ಆ ಗ್ರಾಮದಲ್ಲಿ ಜಯಂತಿ. ಬಸವತತ್ತ್ವ ಪ್ರೇಮಿಗಳ ಒತ್ತಾಸೆ, ಶ್ರೀ ಮಠದ ಭಕ್ತಾದಿಗಳ ಶ್ರದ್ಧೆ. ಕಳೆದ ವರ್ಷ 27-5-90 ರಂದು ಕಾರ್ಯಕ್ರಮ ಉಪನ್ಯಾಸಗಳವುಟ್ಟಿಗೆ ನಡೆದಿತ್ತು. ಮಳೆ ಪ್ರಯುಕ್ತ ನಾಟಕ ನಡೆದಿರಲಿಲ್ಲ ಈ ವರ್ಷವೂ ಮಳೆಯ ಆತಂಕ ಇದ್ದೇಯಿತ್ತು. ಆದರೂ ಸತ್ಸಂಕಲ್ಪ ಮನಸ್ಸುಗಳ ಅನಿಸಿಕೆಯಂತೆ ನಾಟಕವೂ ಪ್ರದರ್ಶನ ಗೊಂಡಿತು.

ಸಮಾರಂಭಕ್ಕೆ ಆಗಮಿಸಿದ್ದ ಪಂಡಿತ ಚನ್ನಪ್ಪ ಎರೆಸೀಮೆಯವರು ಮಾತನಾಡುತ್ತ 'ಅಗ್ನಿಪರೀಕ್ಷೆ'ಯನ್ನುಗೆದ್ದು ಬಂದದ್ದು ಶ್ರೀಮಠ ಎನ್ನುತ್ತ ಜೀವನ ದರ್ಶನವನ್ನು ಉಚ್ಛಕಂಠದಿಂದ ಸಮಸ್ತ ಸಮಾಜದ ಜನತೆಗೂ ಸಾರಿಹೇಳಿದ ಬಸವಣ್ಣ ಎಂದರು. ಭರತ ಖಂಡದ ಧರ್ಮವೀರರಲ್ಲಿ ಬಸವಣ್ಣನಂಥ ಶ್ರೇಷ್ಠರು ಅಪರೂಪ, ಎಂದು ಹೇಳಿದರು.

ಗ್ರಾಮೀಣ ಜನತೆಗೆ ಬಸವಣ್ಣನಂಥ ಮಹಾಮಾನವತಾವಾದಿಯ ಪರಿಚಯ ಮಾಡಿಕೊಡುವ ಆದರ್ಶ ಪ್ರಯತ್ನ ಸಿದ್ಧಗಂಗಾ ಶ್ರೀಶ್ರೀಗಳಿಂದ ನಡೆದಿರುವುದು ನಾಡಿನ ಸಮಾಜದ ಶುಭೋದಯ. ಅದೂ ನಾಟಕ ಮಾಧ್ಯಮದ ಮೂಲಕ ಬಸವ ತತ್ತ್ವಗಳನ್ನು ಪ್ರಸಾರ ಮಾಡುತ್ತಿರುವುದು ಪುಣ್ಯ ಪ್ರದವಾದುದು. ಗ್ರಾಮಾಂತರ ಬಸವ ಜಯಂತಿ "ಸಮವಸರಣ ಮಂಟಪ" ವಿದ್ದಂತೆ. ಬಸವಣ್ಣ ಕೈಲಾಸದೆತ್ತರಕ್ಕೆ, ಲಿಂಗದೆತ್ತರಕ್ಕೆ ಬೆಳೆದು ಬೆಳಗಿದ ಬೆಳಕಿನ ಚೇತನ. ಜೀವನ ದೊಡ್ಡದೆಂದು ಗೌರವಿಸಿದ ಬಸವಣ್ಣ ಧೂಳಿನಿಂದ ಮನುಷ್ಯರನ್ನು ಸೃಷ್ಟಿಸಿದ ವಿನೂತನ ಪವಾಡ ಪುರುಷ ಎಂದು ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಶ್ರೀ ಜಿ.ಎಸ್. ಸಿದ್ಧಲಿಂಗಯ್ಯನವರು ಉಪನ್ಯಾಸ ಮಾಡಿದರು.

ಸಮಾರಂಭದಲ್ಲಿ ದೊಡ್ಡಬಳ್ಳಾಪುರ ತಾಲ್ಲೂಕು ವೀರಶೈವ ಸಮಾಜದ ಅಧ್ಯಕ್ಷರಾದ ಶ್ರೀ ಸಿದ್ದಲಿಂಗಯ್ಯನವರು, ಕಿಶೋರಿ ಸುಧಾ, ಕುಮಾರಿ ಶಶಿಕಲಾ ಮಾತನಾಡಿದರು. ಶಾಸಕರಾದ ಶ್ರೀ ಆರ್. ಎಲ್. ಜಾಲಪ್ಪನವರು ಮಾತನಾಡುತ್ತ ಪೂಜ್ಯ ಶ್ರೀಗಳು ಸಿದ್ದಗಂಗಾಮಠವನ್ನು ಸರಸ್ವತಿಯ ಪೀಠವನ್ನಾಗಿ, ಅನ್ನಪೂರ್ಣೇಶ್ವರಿಯ ಪೀಠವನ್ನಾಗಿ ಸಿರುವುದರ ಜೊತೆಗೆ ಗ್ರಾಮೀಣ ಪ್ರದೇಶಗಳಲ್ಲಿ ಸುಸಂಸ್ಕೃತ ವಾತಾವರಣ, ಪರಿಸರ ಸೃಷ್ಟಿ ಮಾಡುವ ಮಹಾ ಕಾರ್ಯದಲ್ಲಿ ಹಗಲಿರುಳು ಗ್ರಾಮಾಂತರಬಸವ ಜಯಂತಿಯ ಮೂಲಕ ಪ್ರಯತ್ನಿಸಿದ್ದಾರೆ. ನಮ್ಮೆಲ್ಲರ ಭಾಗ್ಯವೆಂಬಂತೆ ಮೂಡಿ ಬಂದಿದ್ದಾರೆ ಎಂದು ಮುಕ್ತಕಂಠದಿಂದ ಪೂಜ್ಯ ಶ್ರೀಗಳವರ ಸೇವೆಯನ್ನು ಶ್ಲಾಘಿಸಿದರು.

"ಇಂದು ಜನಾಂಗ ಮೂರು ಆಕರ್ಷಣೆಗಳಿಗೆ ಬಲಿಯಾಗುತ್ತಿದೆ. ಹಣ, ಅಧಿಕಾರ, ಭೋಗ ಜೀವನಕ್ಕೆ ವಿಶೇಷವಾಗಿ ಮಾರು ಹೋಗುತ್ತಿದೆ. ಸಂಸ್ಕಾರ ಹೀನರಾಗಿ ಜೀವನ ನಡೆಸುವ ದಂದೆ ಇಂದು ಕಾಣಬರುತ್ತಿದೆ. ಮಾನವೀಯತೆ ಮರೆಯಾಗುತ್ತಿದೆ. ಭಾರತೀಯರು ತಲೆ ತಗ್ಗಿಸುವಂಥ ಚಟುವಟಿಕೆಗಳು ತಲೆಯೆ-ತ್ತುತ್ತಿವೆ. ಮನುಷ್ಯ ಅದರಲ್ಲೂ ಕಲಿತ ಮನುಷ್ಯ ರಾಕ್ಷಸನಾಗುತ್ತಿದ್ದಾನೆ. ಇಂಥ ದುಷ್ಟ ಪರಿಸರ, ಪ್ರವೃತ್ತಿಗಳಿಂದ ದೂರ ಸರಿದು ನಿರ್ಮಲ ನೆಮ್ಮದಿಯ ಆತ್ಮ ವಿಶ್ವಾಸದ ಆತ್ಮಾಭಿಮಾನದ ಬದುಕನ್ನು ನಮ್ಮದಾಗಿಸಿಕೊಳ್ಳುವ ಪವಿತ್ರ ಪ್ರಯತ್ನಕ್ಕಾಗಿ ಬಸವಣ್ಣನವರನ್ನು ಅನುಸರಿಸಬೇಕಾಗಿದೆ. ಧರ್ಮದ ಸಂಪತ್ತನ್ನು, ಮೌಲ್ಯಗಳನ್ನು ಬಸವಣ್ಣನವರು ಬಿತ್ತಿದರು. ಬೆಳೆದರು. ಜನಶಕ್ತಿಯನ್ನು ಜಾಗೃತಗೊಳಿಸಿದ ಪವಾಡ ಪುರುಷ ಬಸವಣ್ಣ ಜೀವನ ಯೋಗವನ್ನು ಆಚರಿಸಿ ತೋರಿಸಿಕೊಟ್ಟರು". ಎಂಬುದಾಗಿ ಪರಮ ಪೂಜ್ಯ ಶ್ರೀ ಶ್ರೀಗಳವರು ಅಧ್ಯಕ್ಷ ಪೀಠದಿಂದ ಆಶೀರ್ವಚನ ನೀಡಿದರು.

ರಾತ್ರಿ 9 ಗಂಟೆಗೆ 261ನೆ ನಾಟಕ ಪ್ರಾರಂಭವಾಗಿ ಬೆಳಗಿನ ಆರು ಗಂಟೆಯವರೆಗೆ ನಡೆಯಿತು. ಮಳೆಯೂ ಸಹಕರಿಸಿ ನಾಟಕ ಪ್ರದರ್ಶನಕ್ಕೆ ಅವಕಾಶ ಕಲ್ಪಿಸಿಕೊಟ್ಟಿತು.

ದಿನಾಂಕ 16-5-91 ರಂದು ಹಾಸನ ಜಿಲ್ಲೆ ಸಕಲೇಶ ಪುರದಲ್ಲಿ 262ನೆಯ ಪ್ರಯೋಗವಾಗಿ ಬಸವ ಜಯಂತಿ ನಡೆಯಿತು. ಸಮಾರಂಭ ಸಾಮೂಹಿಕ ವಿವಾಹ ದೊಡನೆ ಜರುಗಿ ವಿಶೇಷವೆನಿಸಿತು. ಕಾಫಿ, ಏಲಕ್ಕಿಗಳ ನಾಡಿನಲ್ಲಿ ಬಸವತತ್ವಗಳ ಪ್ರಚಾರ ಉತ್ಸಾಹ ಶ್ರದ್ಧೆಗಳ ಮಧ್ಯೆ ಅನುರಣಿತವಾಯಿತು.

ಸಮಾರಂಭದಲ್ಲಿ ಬೆಂಗಳೂರು ಬೇಲಿಮಠದ ಅಧ್ಯಕ್ಷರಾದ ಪೂಜ್ಯ ಶ್ರೀ ಶ್ರೀ ಶಿವರುದ್ರಸ್ವಾಮಿಗಳವರು ಹಾಗೂ ಕೊಡ್ಲಿಪೇಟೆ ಕಲ್ಮಠದ ಪೂಜ್ಯ ಶ್ರೀ ಮಹಾಂತ ಸ್ವಾಮಿಗಳವರು ಆಶೀರ್ವಚನ ನೀಡಿದರು.

ಪರಮ ಪೂಜ್ಯ ಶ್ರೀ ಶ್ರೀಗಳವರು ಅಧ್ಯಕ್ಷ ಪೀಠದಿಂದ ಆಶೀರ್ವಚನ ನೀಡುತ್ತ "ಜನಗಳಲ್ಲಿ ನವ ಚೇತನವುಂಟು ಮಾಡಿದ ಬಸವಣ್ಣ ಆರ್ಥಿಕ ತಜ್ಞರಾಗಿದ್ದರು. ವಿಚಾರ ಶಕ್ತಿ ಹೃದಯವಂತಿಕೆಯುಳ್ಳ, ಮಾನವತಾ ಪ್ರೇಮಿ ಬಸವಣ್ಣನವರಂತೆ ಜೀವನ ಕಲೆಯನ್ನರಿತವರು ಮತ್ತೊಬ್ಬರಿಲ್ಲ ಜಗತ್ತಿನ ಇತಿಹಾಸದಲ್ಲಿ ಬಸವಣ್ಣನವರಂಥ ಧರ್ಮದೀಪಕ' ಲೋಕ ಸುಧಾರಕ, ಮನುಕುಲೋದ್ಧಾರಕ ಇಲ್ಲ ಎನ್ನುತ್ತ "Basavanna is a wonder of creation" ಎಂಬ ವಿದ್ವಾಂಸರ ಮಾತನ್ನು ಉಲ್ಲೇಖಿಸಿದರು.

ರಾತ್ರಿ ನಾಟಕ ಪ್ರದರ್ಶನವಾದಾಗ ಇಪ್ಪತ್ತು ಸಾವಿರ ಪ್ರೇಕ್ಷಕರು ಹಿಮ ಚಳಿಗಳ ಮಧ್ಯೆಯೂ ತದೇಕ ಚಿತ್ತರಾಗಿ ನೋಡಿ ನಲಿದರು.

ದಿನಾಂಕ 1-6-91 ರಂದು 263 ನೆಯ ಪ್ರಯೋಗವಾಗಿ ಗ್ರಾಮಾಂತರ ಬಸವ ಜಯಂತಿ ಕಡೂರು ತಾ|| ಖಂಡುಗದಹಳ್ಳಿ ಶ್ರೀ ಸೋಮೇಶ್ವರ ಕ್ಷೇತ್ರದಲ್ಲಿ ನಡೆದಾಗ ನೆರೆದಿದ್ದ ಬೃಹತ್ ಜನಸ್ತೋಮ ತೃಪ್ತಿ ವಿಶ್ವಾಸಗಳನ್ನು ವ್ಯಕ್ತಪಡಿಸಿತು. ಮಳೆಬಿದ್ದು ಭೂಮಿ ನೆನೆದಿತ್ತು ಹಳ್ಳಕೊಳ್ಳಗಲ್ಲಿ ನೀರು ನಿಂತಿತ್ತು. ಸೋಮೇಶ್ವರ ಕ್ಷೇತ್ರದಲ್ಲಿ ನೂತನ ಕಲ್ಯಾಣ ಮಂಟಪ ಬಾಗಿಲು ತೆರಧಿತ್ತು. ಸಾಮೂಹಿಕ ಮದುವೆ ನಡೆದಿತ್ತು. ಹರ ಗುರು ಚರಮೂರ್ತಿಗಳ ಸಮೂಹದ ಮಧ್ಯೆ ಮಂತ್ರಿಗಳ ಶಾಸಕರ ಜಿಲ್ಲಾ ಪರಿಷತ್ ಅಧ್ಯಕ್ಷರ, ಸದಸ್ಯರ, ವಿವಿಧ ಅಧಿಕಾರಿ ವರ್ಗದ ಮಂದಿಯೊಂದಿಗೆ ಸಭೆ ಶೋಭಾಯಮಾನವಾಗಿತ್ತು, ಕಾರ್ಯ ಕರ್ತರಾದ ಬಾಸೂರಿನ ಶ್ರೀ ಸೋಮ ಶೇಖರಪ್ಪ ಮತ್ತು ಸಂಗಡಿಗರ ಶ್ರಮ ಸಾರ್ಥಕವಾಗಿತ್ತು.

ಸಿರಿಗೆರೆ ಬೃಹ್ಮನಠದ ಪೂಜ್ಯ ಶ್ರೀ ಪಂಡಿತಾರಾಧ್ಯ ಸ್ವಾಮಿಗಳು ಆಶೀರ್ವಚನ ನೀಡುತ್ತ ಕುಡಿತದ ಹಾವಳಿಯಿಂದ ಸಮಾಜ ಜೀವನ ನೈತಿಕ ದಿವಾಳಿಯನ್ನೆಬ್ಬಿಸಿದ ಘಟನೆಗಳನ್ನು ಉದಾಹರಿಸುತ್ತ ಬಸವಣ್ಣ ನೈತಿಕ ಜೀವನಕ್ಕೆ ಕೊಟ್ಟ ಪ್ರಾಶ್ತ್ಯವನ್ನು ಒತ್ತಿ ಹೇಳಿದರು.

ಹಣ್ಣೆ ಮಠದ ಅಧ್ಯಕ್ಷರಾದ ಪೂಜ್ಯ ಶ್ರೀ ಶಿವಲಿಂಗಶಿವಾಚಾರ್ಯಸ್ವಾಮಿಗಳು ಆಶೀರ್ವಚನ ನೀಡುತ್ತ ಸಿದ್ಧಗಂಗಾ ಶ್ರೀಗಳಿಂದ ಅದ್ಭುತ ಕಾರ್ಯ ನಡೆದಿದೆ ಎಂದರಲ್ಲದೆ ಜನತೆ ಪರಿಶುದ್ಧ ಭಕ್ತಿಯಿಂದ ಗುರುಲಿಂಗ ಜಂಗಮರನ್ನು ಆರಾಧಿಸಬೇಕೆಂದರು.

ಚಿಕ್ಕಮಗಳೂರು ದೊಡ್ಡ ಕುರುಬರಹಳ್ಳಿ ಜಾಬಾಲಿ ಪುರಿಮಠ ಬಸವ ಮಂದಿರದ ಅಧ್ಯಕ್ಷರಾದ ಪೂಜ್ಯ ಶ್ರೀ ಜಯಚಂದ್ರಶೇಖರ ಸ್ವಾಮಿಗಳವರು ‹‹ಸಿದ್ಧಗಂಗೆಯ ಪೂಜ್ಯ ಶ್ರೀ ಶ್ರೀಗಳು ಗ್ರಾಮಾಂತರ ಬಸವ ಜಯಂತಿಯ ಮೂಲಕ ಸಮಾಜದಲ್ಲಿ ಹೊಸ ಯುಗವನ್ನೇ ನಿರ್ಮಿಸುತ್ತ ನಡೆದಿದ್ದಾರೆ. ಜನಾಂಗ ಜೀವಂತವಾಗಿ ಮಾನವೀಯವ ಮೌಲ್ಯಗಳನ್ನು ಗೌರವಿಸುವ ಮಹೋನ್ನತ ಸಂಕಲ್ಪ ದೀಕ್ಷಿತರಾಗ ಬೇಕಾಗಿದೆ. ಬಸವಣ್ಣನವರ ತತ್ತ್ವಗಳಿಂದ ಮಾತ್ರ ನವ ಸಮಾಜ ರಚನೆ ಸಾಧ್ಯ ’ ಎಂದು ಆಶೀರ್ವಚನ ಮಾಡಿದರು.

ಸಚಿವರಾದ ಶ್ರೀ ಮಲ್ಲಿಕಾರ್ಜುನ ಪ್ರಸನ್ನ, ಶಾಸಕರಾದ ಶ್ರೀ ವೀರಭದ್ರಪ್ಪ, ಜಿಲ್ಲಾ ಪರಿಷತ್ ಅಧ್ಯಕ್ಷರಾದ ಶ್ರೀ ರಾಮದಾಸ್, ಮಾಜಿ ಅಧ್ಯಕ್ಷರಾದ ಶ್ರೀ ಕೃಷ್ಣಮೂರ್ತಿ, ಸೊಲ್ಲಾಪುರದ ಬಸವರಾಜ ಶಾಸ್ತ್ರಿಗಳು, ಜನಪದ ತಜ್ಞರಾದ ಶ್ರೀ ಗೊ.ರು. ಚೆನ್ನಬಸಪ್ಪ, ಶ್ರೀ ಹೆಚ್. ವಿ. ವೀರಭದ್ರಯ್ಯ ಅವರುಗಳು ಉಪನ್ಯಾಸ ಮಾಡಿ ಬಸವಣ್ಣನವರ ಜೀವನದ ವಿವಿಧ ಮುಖಗಳ ಪರಿಚಯ ಮಾಡಿಸಿದರು.

ಪರಮ ಪೂಜ್ಯರು ಆಶೀರ್ವಚನ ನೀಡುತ್ತ, ಬಸವಣ್ಣ ಬೋಧಿಸಿದ ಮಂತ್ರ ಸಾರ್ವಕಾಲಿಕವಾದದ್ದು. ಉತ್ತು ಬಿತ್ತುವಮಂತ್ರ, ಬಿತ್ತಿ ಬೆಳೆಯುವ ಮಂತ್ರ ಒಟ್ಟಿನಲ್ಲಿ ದುಡಿದು ಬಾಳುವ ಆತ್ಮಾಭಿಮಾನದ ಮಂತ್ರ ಎನ್ನುತ್ತ ದುಡಿಮೆ ಮನುಷ್ಯನಿಗೆ ಸ್ವಾಭಿಮಾನದೊಂದಿಗೆ ಮಾನವೀಯತೆಯನ್ನೂ ಕಲಿಸುವ ದಿವ್ಯ ಶಕ್ತಿ. ತನ್ನ ದುಡಿಮೆ ತನಗೊಬ್ಬನಿಗೇ ಸೇರಬೇಕಾದುದಲ್ಲ ಆ ದುಡಿಮೆಗೆ ಕಾರಣರಾದ ಎಲ್ಲರಿಗೆ ಅದರಲ್ಲಿ ಪಾಲಿದೆ ಎಂಬ ಅರ್ಪಣಾ ಭಾವವನ್ನೂ ಬೆಳೆಸುತ್ತದೆ. ಅದೇ ದಾಸೋಹ. ಸ್ವಾರ್ಥದಿಂದ ಪರೋಪಕಾರದ ಕಡೆಗೆ, ಸಂಕುಚಿತತೆಯಿಂದ ಅನಂತದ ಕಡೆಗೆ ವ್ಯಕ್ತಿತ್ವ ವಿಕಾಸವಾಗುವಂತೆ ಮಾಡುತ್ತದೆ ಬಸವಣ್ಣ ಈ ಮಹಾಮಂತ್ರದ ದ್ರಷ್ಟಾರ, ನೇತಾರನೆಂದು ನುಡಿದರು.

ಬಾಸೂರಿನ ಶ್ರೀ ಬಿ. ಎಂ. ಪರಮೇಶ್ವರಪ್ಪನವರು ಕಾರ್ಯಕ್ರಮವನ್ನು ನಿರೂಪಿಸಿದರು. ಕಲ್ಯಾಣಮಂಟಪಕ್ಕೆ ಸಹಾಯ ಮಾಡಿದ ದಾನಿಗಳನ್ನು ಸಮಾರಂಭದಲ್ಲಿ ಸನ್ಮಾನಿಸಿ ಗೌರವಿಸಿದರು.

ರಾತ್ರಿ ಜಗಜ್ಯೋತಿ ಬಸವೇಶ್ವರ ನಾಟಕ ನಡೆಯಿತು.

ಮತ್ತೆ ಬರೆಯುತ್ತೇನೆ.

---

## ಆಜೀವ ಸದಸ್ಯರುಗಳಲ್ಲಿ ಒಂದು ಮನವಿ.

ಸಿದ್ಧಗಂಗಾ ಪತ್ರಿಕೆಯ ಅನೇಕ ಆಜೀವ ಸದಸ್ಯರುಗಳ ವಿಳಾಸಗಳು ಬದಲಾಗಿರುವುದರಿಂದ ಕಾರ್ಯಾಲಯದಿಂದ ಕಳುಹಿಸಿದ ಸಂಚಿಕೆಗಳು ಕೆಲವು ಸದಸ್ಯರುಗಳಿಗೆ ತಲುಪದೆ ಹಿಂತಿರುಗುತ್ತಿವೆ. ದಯವಿಟ್ಟು ನಿಮ್ಮ ಬದಲಾದ ವಿಳಾಸಗಳನ್ನು ಆಗಿಂದಾಗ್ಗೆ ಪತ್ರಿಕಾ ಕಾರ್ಯಾಲಯಕ್ಕೆ ಕಳುಹಿಸಿ ಕೊಡುವುದರ ಮುಖೇನ "ಸಿದ್ಧಗಂಗಾ" ನಿಮಗೆ ಕ್ರಮವಾಗಿ ತಲುಪಲು ಸಹಕರಿಸಬೇಕಾಗಿ ಪ್ರಾರ್ಥನೆ. **ತಮ್ಮ ಸದಸ್ಯತ್ವದ ನಂಬರನ್ನು ತಪ್ಪದೇ ತಿಳಿಸಿರಿ.**

ಪ್ರಕಾಶಕರು.

---

# ಕ್ಷೇತ್ರವಾರ್ತೆ

## ತ್ರಿವಿಧ ದಾಸೋಹ ಮೂರ್ತಿಗಳಾದ ಪರಮ ಪೂಜ್ಯ ಡಾ|| ಶ್ರೀ ಶ್ರೀ ಶ್ರೀ ಶಿವಕುಮಾರ ಮಹಾ ಸ್ವಾಮಿಗಳವರ ಪೀಠಾರೋಹಣ ವಜ್ರಮಹೋತ್ಸವ ಆಚರಣೆ ಸಂಬಂಧವಾಗಿ ನಡೆದ ಪೂರ್ವ ಸಿದ್ಧತಾ ರಾಜ್ಯಮಟ್ಟದ ಭಕ್ತರ ಮಹಾಸಭೆಯ ವರದಿ.

ಹೆಚ್. ಬಿ. ಗಂಗಾಧರಯ್ಯ

9 ಜೂನ್ 1991 ಭಾನುವಾರ ಶ್ರೀ ಸಿದ್ಧಗಂಗಾ ಮಠದಲ್ಲಿ ನಡೆದ ಪರಮ ಪೂಜ್ಯ ಶ್ರೀ ಶ್ರೀಗಳವರ ಪೀಠಾರೋಹಣ ವಜ್ರಮಹೋತ್ಸವ ಪೂರ್ವ ಸಿದ್ಧತಾ ಮಹಾಸಭೆಗೆ ರಾಜ್ಯಾದ್ಯಂತ ಹತ್ತು ಸಹಸ್ರಕ್ಕೂ ಹೆಚ್ಚು ಭಕ್ತಾದಿಗಳು ಭಾಗವಹಿಸಿದ್ದರು. ಈ ಮಹಾಸಭೆ ರಾಜ್ಯದ ಕೃಷಿ ಮತ್ತು ತೋಟಗಾರಿಕೆ ಸಚಿವರಾದ ಮಾನ್ಯ ಪುಟ್ಟಸ್ವಾಮಿ ಗೌಡರ ಅಧ್ಯಕ್ಷತೆಯಲ್ಲಿ ಸಮಾವೇಶಗೊಂಡಿತ್ತು.

ಪ್ರಾರಂಭದಲ್ಲಿ ಪೀಠಾರೋಹಣ ವಜ್ರಮಹೋತ್ಸವದ ಕಾರ್ಯಾಧ್ಯಕ್ಷರಾದ ಶ್ರೀ ಬಿ. ಎಸ್. ಮುದ್ದಪ್ಪನವರು, ನಿವೃತ್ತ ಐ. ಎ. ಎಸ್. ಆರ್ಥಿಕ ಇಲಾಖೆಯ ಕಾರ್ಯ ದರ್ಶಿಗಳು, ಯೋಜಿತ ವಜ್ರಮಹೋತ್ಸವ ಅಭೂತ ಪೂರ್ಣವಾಗಿ ರಚನಾತ್ಮಕ ಸ್ಮಾರಕ ವನ್ನು ಪ್ರತಿಬಿಂಬಿಸುವಂತೆ ಇರಬೇಕೆಂದು ಪ್ರಸ್ತಾಪಿಕ ಮಾತುಗಳನ್ನಾಡಿ ನಾಡಿನ ಶ್ರೇಯೋಭಿವೃದ್ಧಿಗಾಗಿ ತಮ್ಮನ್ನು ಸಂಪೂರ್ಣವಾಗಿ ಅರ್ಪಿಸಿ ಕೊಂಡಿರುವ ಪೂಜ್ಯ ಶ್ರೀ ಶ್ರೀ ಗಳವರ ಮಹಾಪುಣ್ಯ ಕಾರ್ಯದಲ್ಲಿ ಭಾಗಿಯಾಗಲು ಅವಕಾಶ ಲಭ್ಯವಾದುದಕ್ಕೆ ಸಂತೋಷ ವ್ಯಕ್ತಪಡಿಸಿದರು. ಜವಾಬ್ದಾರಿಯಿಂದ ಈ ಕಾರ್ಯವನ್ನು ನಿರ್ವಹಿಸುವುದಾಗಿ ಆಶ್ವಾಸನೆ ಇತ್ತರು.

ರೂಪಿಸಿರುವ ಯೋಜನೆಗಳನ್ನು ಭಕ್ತ ಕೋಟಿಗೆ ಪರಿಚಯಿಸಿದರು.

1 ಶ್ರೀ ಮಠದಲ್ಲಿ ವಿದ್ಯಾರ್ಥಿಗಳ ವಸತಿ ಸೌಕರ್ಯಕ್ಕಾಗಿ 1500 ಚ. ಅ ವಿಸ್ತೀರ್ಣ ಹೊಂದಿರುವ 150 ಸುಸಜ್ಜಿತ ಕೊಠಡಿಗಳ ನಿರ್ಮಾಣ.

2 ಏಕಕಾಲದಲ್ಲಿ 2,000 ವಿದ್ಯಾರ್ಥಿಗಳು ಕೂಡುವ ಮಹಾಪ್ರಸಾದ ನಿಲಯ.

3 ನೀರು ಸರಬರಾಜು ಮತ್ತು ನೈರ್ಮಲ್ಯ ವ್ಯವಸ್ಥೆ.

4 ಶ್ರೀ ಶ್ರೀ ಗಳವರ ಜನ್ಮಸ್ಥಳವಾದ ವೀರಾಪುರದಲ್ಲಿ ವೃತ್ತಿ ಶಿಕ್ಷಣ ಕೇಂದ್ರ ಸ್ಥಾಪನೆ.

ಈ ನಾಲ್ಕು ರೂಪಿಸಿರುವ ಯೋಜನೆಗಳು ಶ್ರೀ ಮಠಕ್ಕೆ ಸದ್ಯದ ಪರಿಸ್ಥಿತಿಯಲ್ಲಿ ಅವಶ್ಯಕವಾಗಿವೆ. ಇವುಗಳ ಪೂರೈಕೆಗಾಗಿ ಸುಮಾರು ಮೂರು ಕೋಟಿ ಐವತ್ತು ಲಕ್ಷ ರೂಗಳು ಬೇಕಾಗುತ್ತವೆಂದು ಸಭೆಯ ಮುಂದಿಟ್ಟರು. ಇದಕ್ಕೆ ನೆರವು ಕಡ್ಡಾಯವಿಲ್ಲ.

ಸ್ವಯಂ ಪ್ರೇರಿತರಾಗಿ ಭಕ್ತಕೋಟಿ ಉದಾರವಾಗಿ ನೀಡಬೇಕೆಂದು ಕೋರಿದರು. ಕೊಠ ಗಳನ್ನುಕಟ್ಟಿಸಿ ಕೊಟ್ಟವರ ದಾನಿಗಳ ಹೆಸರುಗಳನ್ನು ಕೊಠಡಿಗಳ ಮುಂದೆ ಪ್ರಕಟಿಸ ಲಾಗುತ್ತದೆಂದು ತಿಳಿಸಿದರು.

ಈ ಎಲ್ಲ ಯೋಜನೆಗಳನ್ನು ಗಮನದಲ್ಲಿರಿಸಿಕೊಂಡು ಪೂಜ್ಯ ಶ್ರೀ ಶ್ರೀಗಳವರಿಗೆ ನಮನಗಳನ್ನು ಅರ್ಪಿಸಿ ಸಲಹೆ ನೀಡಿದವರೆಂದರೆ ವಿಧಾನ ಸಭಾಸದಸ್ಯರಾದ ಶ್ರೀ ಕೆ. ಲಕ್ಕಪ್ಪ, ಮಾಜಿ ಸಚಿವರಾದ ಶ್ರೀ ಎಸ್. ರೇವಣ್ಣನವರು, ಮಾಜಿ ಲೋಕಸಭಾ ಸದಸ್ಯರಾದ ಶ್ರೀ ಜಿ. ಎಸ್. ಬಸವರಾಜ್, ಮಾಜಿ ಸಚಿವರಾದ ಶ್ರೀ ಲಕ್ಷ್ಮಿನರಸಿಂಹಯ್ಯ, ಶಾಸಕರಾದ ಷಫಿ ಅಹಮ್ಮದ್, ಮಾಜಿ ಸಚಿವರಾದ ಎನ್. ಬಸವಯ್ಯ, ಮಾಜಿ ಶಾಸಕರಾದ ಶ್ರೀ ವಿ. ಎಲ್. ಶಿವಪ್ಪ, ಕೈಗಾರಿಕೋದ್ಯಮಿಗಳಾದ ಶ್ರೀ ಎನ್. ಆರ್. ಜಗದೀಶ್, ಪದ್ಮಶ್ರೀ ಆರ್. ಎಂ. ಬಿ ಆರಾಧ್ಯರು, ಬಾಪೂಜಿ ವಿದ್ಯಾಸಂಸ್ಥೆಯ ಕಾರ್ಯದರ್ಶಿಗಳಾದ ಶ್ಯಾಮನೂರು ಶ್ರೀ ಶಿವಶಂಕರಪ್ಪ, ಸಿದ್ಧಾರ್ಥ ವಿದ್ಯಾಸಂಸ್ಥೆಯ ಸಂಸ್ಥಾಪಕ ಕಾರ್ಯದರ್ಶಿಗಳಾದ ಶ್ರೀ ಹೆಚ್. ಎಂ. ಗಂಗಾಧರಯ್ಯ, ಹಾಸನದ ಶ್ರೀ ಕೆ.ಎಂ. ರುದ್ರಪ್ಪ, ಶ್ರೀ ಶಾಂತರಾಜು, ಶ್ರೀ ಶಿವಕುಮಾರ್, ಚಿಕ್ಕಮಗಳೂರಿನ ಶ್ರೀ ಕೆ.ಎಂ. ಬಸವೇಗೌಡರು, ಎ.ಸ್.ಐ.ಟಿ ಪ್ರಾಂಶುಪಾಲರಾದ ಶ್ರೀ ಜಿ. ಪರಮೇಶ್ವರಪ್ಪ, ಪ್ರೊ|| ಎಂ. ಷಡಕ್ಷರಿ ಸ್ವಾಮಿಗಳು, ಶ್ರೀ ಮಠದ ಹಳೆಯ ವಿದ್ಯಾರ್ಥಿಸಂಘದ ಪ್ರಧಾನ ಕಾರ್ಯದರ್ಶಿಗಳಾದ ಪ್ರೊ. ಶ್ರೀ ಎಂ. ಎನ್. ಚನ್ನಬಸಪ್ಪನವರು.

ಸುಪ್ರಸಿದ್ಧ ಸಾಹಿತಿಗಳಾದ ಸಿದ್ದಯ್ಯ ಪುರಾಣಿಕರು ಮಾತನಾಡುತ್ತಾ ನಾಲ್ಕು ಶಕ್ತಿಗಳಾದ ಇಚ್ಛಾಶಕ್ತಿ, ಜ್ಞಾನಶಕ್ತಿ, ಕ್ರಿಯಾಶಕ್ತಿ, ತಪಶ್ಶಕ್ತಿ, ಶ್ರೀ ಶ್ರೀ ಗಳವರಲ್ಲಿ "ಏಕೀಭವಿಸಿರುವುದರಿಂದ ಮಹಾಕಾರ್ಯವನ್ನು ಮಾಡಿ ತೋರಿಸಿದ್ದಾರೆ, ಅವರ ಸ್ಮರಣೆಗಾಗಿ ಯಾವ ಕಾರ್ಯ ಮಾಡಿದರೂ ಅದು ಸಾಲದು. ಅವರು ನೀಡಿದ ಸಲಹೆಗಳೆಂದರೆ ಶ್ರೀ ವೀರಾಪುರದಲ್ಲಿ ಸ್ಥಾಪಿಸಲಿರುವ ವೃತಿ ಶಿಕ್ಷಣ ಕೇಂದ್ರಕ್ಕೆ **ಕಾಯಕ ಪೀಠವೆಂದು** ಹೆಸರಿಡಬೇಕು, ಭಾರತದಲ್ಲಿ ಶ್ರೀ ಶ್ರೀ ಗಳವರ ಅಂಚೆ ಚೀಟಿ ಬಿಡುಗಡೆ ಮಾಡಬೇಕು. ಶ್ರೀ ಶ್ರೀಗಳವರ ಸಾಧನೆಯ ಬಗ್ಗೆ ಗ್ರಂಥ ಬಿಡುಗಡೆ. ದೆಹಲಿಯಲ್ಲಿ ಕರ್ನಾಟಕ ಪ್ರತಿನಿಧಿಸುವಂತ ಪುತ್ಥಳಿ ಸ್ಥಾಪನೆ.

ನಾಡಿನ ಮಠಾಧೀಶರ ಪರವಾಗಿ ಬೇಲಿಮಠಾಧ್ಯಕ್ಷರಾದ ಪೂಜ್ಯ ಶ್ರೀ ಶ್ರೀ ಶಿವರುದ್ರಸ್ವಾಮಿಗಳು ಮಾತನಾಡಿ ನಿರ್ಮಿಸಲಿರುವ ವಿದ್ಯಾರ್ಥಿಗಳ ಪ್ರಸಾದ ನಿಲಯದ ಖರ್ಚಿನ ಒಂದು ಭಾಗವನ್ನು ಎಲ್ಲಾ ಮಠಾಧಿಪತಿಗಳು ಕೊಡಲಿದ್ದಾರೆ ಎಂದು

ಹೇಳಿದರು ಶ್ರೀ ಶ್ರೀ ಗಳವರ ಜೀವನ ಚರಿತ್ರೆಯನ್ನು ಕನ್ನಡ, ಇಂಗ್ಲೀಷ್ ಮತ್ತು ಹಿಂದೀ ಭಾಷೆಗಳಲ್ಲಿ ಪ್ರಕಟಿಸಿ, ಸಾಕ್ಷ್ಯಚಿತ್ರವನ್ನು ದೂರದರ್ಶನದಲ್ಲಿ ಪ್ರದರ್ಶಿಸಬೇಕೆಂದು ಸಲಹೆ ಇತ್ತರು.

ಮೈಸೂರಿನ ಶ್ರೀ ಹೆಚ್. ಗಂಗಾಧರನ್ ಮಾತನಾಡಿ ನಮ್ಮ ರಾಜ್ಯ ಶ್ರೀ ಶ್ರೀ ಗಳವರ 84 ನೇ ಜನ್ಮದಿನೋತ್ಸವ ಆಚರಿಸಿದ್ದು ನಮ್ಮ ಪೂಣ್ಯ. ಲಕ್ಷೋಪಲಕ್ಷ ಮಕ್ಕಳಿಗೆ ಶಿಕ್ಷಣ ನೀಡಿ ಬಡಕುಟುಂಬಗಳ ಉದ್ಧಾರವಾಗಿದೆ. ಜೀತಪದ್ಧತಿಯಿಂದ ವಿಮುಕ್ತಗೊಳಿಸಿ ಬಾಳಿಗೆ ಬೆಳಕು ನೀಡಿ ಆಶೀರ್ವದಿಸಿದ್ದಾರೆ. ಇಂತಹ ಮಹಾ ಸ್ವಾಮಿಗಳವರಿಗೆ ಭಾರತ ಪ್ರಶಸ್ತಿ ಮತ್ತು ನೊಬೆಲ್ ಪ್ರಶಸ್ತಿ ನೀಡಬೇಕೆಂದು ನಾಡಿನ ಭಕ್ತ ಸಮುದಾಯದಪರವಾಗಿ ಬಿನ್ನವಿಸಿಕೊಂಡರು.

ಈ ಸಮಾರಂಭದ ಪೀಠಾರೋಹಣ, ವಜ್ರಮಹೋತ್ಸವದ ಸಮಿತಿ ಕಾರ್ಯದರ್ಶಿಗಳಾದ ಶ್ರೀ ಎಸ್. ಎಸ್. ಹಸಬಿಯವರು ಸಮಾರಂಭದಲ್ಲಿ ಉಪಸ್ಥಿತರಿದ್ದರು

ಶ್ರೀ ಮಠದ ಉತ್ತರಾಧಿಕಾರಿಗಳಾದ ಪರಮ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾ ಸ್ವಾಮಿಗಳು ಸಮಾರಂಭದಲ್ಲಿ ಮಾತನಾಡಿ ಪೂಜ್ಯ ಗುರುಗಳ ಪೀಠಾರೋಹಣ ವಜ್ರ ಮಹೋತ್ಸವ ಅಭೂತ ಪೂರ್ವವಾಗಿ ನಡೆಸಲು ಉತ್ಸಾಹದಿಂದ ಮುಂದೆ ಬಂದಿರುವ ಭಕ್ತ ಸ್ತೋಮವನ್ನು ಆನಂದದಿಂದ ಆಶೀರ್ವದಿಸಿದರು.

ಪೀಠಾರೋಹಣ ವಜ್ರ ಮಹೋತ್ಸವದ ಅಧ್ಯಕ್ಷರಾದ ನೇತ್ರದಾನಿ ಪದ್ಮಭೂಷಣ ಡಾ|| ಎಂ.ಸಿ. ಮೋದಿಯವರು ಮಾತನಾಡುತ್ತಾ ಶ್ರೀ ಶ್ರೀಗಳು ಮಾಡುತ್ತಿರುವ ಮಹಾಕಾರ್ಯ ಜಗತ್ತಿನಲ್ಲಿ ಯಾರೂ ಮಾಡಿಲ್ಲ. ಸ್ವಾಮಿಗಳಿಂದ ಮಠ ಪ್ರಗತಿಯಾಗಿದೆ. ಮಠದಿಂದ ಸ್ವಾಮಿಗಳಲ್ಲ. ನಾವೆಲ್ಲರು ಹೆಚ್ಚು ಜವಾಬ್ದಾರಿಯಿಂದ ಈ ಕಾರ್ಯವನ್ನು ಯಶಸ್ವಿಗೊಳಿಸಬೇಕಾಗಿದೆ. ಇದಕ್ಕಾಗಿ ನಾಡಿನ ಎಲ್ಲಾ ಭಕ್ತ ಸ್ತೋಮ ತಮ್ಮ ತನು, ಮನ, ಧನಗಳನ್ನು ಭಕ್ತಿ ಭಾವದಿಂದ ಈ ಪವಿತ್ರ ಕಾರ್ಯಕ್ಕೆ ಅರ್ಪಿಸಬೇಕೆಂದು ಮನವಿ ಮಾಡಿಕೊಂಡರು.

ಸಮಾರಂಭದ ಅಧ್ಯಕ್ಷತೆ ವಹಿಸಿದ್ದ ಶ್ರೀ ಪುಟ್ಟಸ್ವಾಮಿಗೌಡರು ಮಾತನಾಡುತ್ತ ಪರಮ ಪೂಜ್ಯ ಮಹಾಸ್ವಾಮಿಗಳು ಎಲ್ಲ ಮಾನವೀಯ ಗುಣಗಳನ್ನು ಮೈಗೂಡಿಸಿಕೊಂಡು ದೈವಾಂಶ ಸಂಭೂತರಾಗಿದ್ದಾರೆ. ಕರ್ನಾಟಕದ ಎಲ್ಲ ಮಠ ಪಂಥಗಳಿಗೆ ಈ ಮಠ ಬೆಳಕು ನೀಡಿದೆ. ಭಾರತದಲ್ಲಿ ಶ್ರೇಷ್ಠತೆ ಪಡೆದವರಲ್ಲಿ ಶ್ರೀ ಶ್ರೀ ಗಳವರು ಪ್ರಥಮ. ಅವರನ್ನು ನೋಡಿದಾಗ ದಯಾಮಯನಾದ ಭಗವಂತನ ದರ್ಶನ ಪಾದಂತಾಗುತ್ತದೆ. ಇವರ ಸೇವೆ ಎಲ್ಲಾ ಕಾಲಕ್ಕೂ ಶ್ಲಾಘನೀಯವಾಗಿ ಮುಂದಿನ

ಪೀಳಿಗೆಗೆ ಮಾರ್ಗದರ್ಶನವಾಗಿದೆ. ಹಮ್ಮಿಕೊಂಡಿರುವ ವಜ್ರಮಹೋತ್ಸವಕ್ಕೆ ನನ್ನಿಂದಾಗಬಹುದಾದ ಸಂಪೂರ್ಣ ಸಹಕಾರವನ್ನು ನೀಡುತ್ತೇನೆ. ವೈದ್ಯಕೀಯ ಕಾಲೇಜಿನ ಪ್ರಸ್ತಾಪಕ್ಕೆ ನನ್ನ ಸಂಪೂರ್ಣ ಪ್ರಯತ್ನ ಇದೆ. ಅಲ್ಲದೆ ಕೃಷಿ ಕಾಲೇಜು ಮತ್ತು ಅಗತ್ಯವಾದ ನೀರು ಮತ್ತು ನೈರ್ಮಲ್ಯ ವ್ಯವಸ್ಥೆಗೆ ಸರ್ಕಾರದ ಕಾನೂನಿನ ವ್ಯಾಪ್ತಿಯೊಳಗೆ ನೀಡಬಹುದಾದ ನೆರವು ಕೊಡಿಸುವುದಾಗಿ ಆಶ್ವಾಸನೆ ಇತ್ತರು.

ಕೊನೆಯಲ್ಲಿ ಪರಮ ಪೂಜ್ಯ ಮಹಾಸ್ವಾಮಿಗಳು ಆಶೀರ್ವಚನ ನೀಡುತ್ತಾ ಸಾಮಾಜಿಕ ಜೀವನ ಪರಿಶುದ್ಧವಾಗುವ ತನಕ ದೇಶದ ಭವಿಷ್ಯ ಉತ್ತಮವಾಗಲಾರದು. ಈ ದಿಶೆಯಲ್ಲಿ ರಾಷ್ಟ್ರನಾಯಕರು ಚಿಂತನೆ ಮಾಡಬೇಕು. ಮಠಮಾನ್ಯಗಳು ಸಲ್ಲಿಸಿರುವ ಸೇವೆಯನ್ನು ಸಮಾಜ ಅರ್ಥ ಮಾಡಿಕೊಳ್ಳುತ್ತಿರುವುದು ಸಂತೋಷ. ನಾವು ಮಾಡುತ್ತಿರುವ ಸೇವೆ ನಮ್ಮ ಶ್ರೀ ಗುರು ಕೃಪೆಯಿಂದ ನಡೆದಿದೆ ಎಂದು ಸ್ಮರಿಸಿದರು. ತಮಗೆ ಒದಗಿ ಬಂದ ಸಮಾಜದ ಎಲ್ಲ ವರ್ಗದ ಜನತೆ ಸಹಕಾರ ಸಹಾಯಗಳನ್ನು ನೆನೆದರು. ಪ್ರಾಮಾಣಿಕ ವ್ಯಕ್ತಿಯಾಗಿ ಸೇವಾಕಾರ್ಯಗಳಲ್ಲಿ ಭಾಗಿಯಾಗಿದ್ದ ನಿವೃತ್ತ ಪ್ರಾಧ್ಯಾಪಕರಾದ ವಿದ್ವಾನ್ ಶ್ರೀ ಬಿ. ಗಂಗಪ್ಪನವರನ್ನು ಸ್ಮರಿಸಿದರು. ಶ್ರೀ ಮಠದ ಏಳಿಗೆಗೆ ಸದ್ಭಾವನೆ ಕೊಡುಗೆ ನೀಡಿದ ಚೇಳೂರಿನ ಚಿಕ್ಕಣ್ಣನ ಹೃದಯ ವಾತ್ಸಲ್ಯ ಆದರಣೀಯವಾದದ್ದು ಎಂದು ನುಡಿದರು.

ಶ್ರೀ ಗೊ.ರು ಚನ್ನಬಸಪ್ಪನವರು ಸಭೆಯನ್ನು ಸ್ವಾಗತಿಸುತ್ತಾ ಕಾರ್ಯಕ್ರಮ ನಿರೂಪಿಸಿದರು. ಶ್ರೀ ಕೆ.ಎಂ. ರೇವಣ್ಣಸಿದ್ದಯ್ಯನವರು ಗಣ್ಯರಿಂದ ಬಂದಿದ್ದ ಸಂದೇಶಗಳನ್ನು ಓದಿದರು. ಶ್ರೀ ಹೆಚ್. ವಿ. ವೀರಭದ್ರಯ್ಯನವರು ವಂದಿಸಿದರು.

ಯೋಜಿತ ವಜ್ರಮಹೋತ್ಸವ ಸಂಸ್ಮರಣಾರ್ಥವಾಗಿ ಸುಸಜ್ಜಿತ ವಿದ್ಯಾರ್ಥಿ ನಿಲಯ ಮಹಾ ಪ್ರಸಾದನಿಲಯಗಳ ಕಟ್ಟಡಗಳಿಗೆ ಉದಾರವಾಗಿ ದಾನ ನೀಡಲು ಸಭೆಯಲ್ಲಿ ವಾಗ್ದಾನ ಮಾಡಿದ ಮಹನೀಯರುಗಳು

**1. ಆರು ಕೊಠಡಿಗಳ ಒಂದು ಬ್ಲಾಕ್‌ನ್ನು ಕಟ್ಟಿಸಿಕೊಡುವ ಮಹನೀಯರುಗಳು**

1) ಶ್ರೀ ಶ್ಯಾಮನೂರು ಶಿವಶಂಕರಪ್ಪನವರು, ಕಾರ್ಯದರ್ಶಿಗಳು, ಬಾಪೂಜಿ ವಿದ್ಯಾಸಂಸ್ಥೆ, ದಾವಣಗೆರೆ.

2) ಶ್ರೀ ಎಸ್. ಷಡಕ್ಷರಿ ಅವರು, ಮಾಲೀಕರು, ಕಂಫರ್ಟ್ ಇನ್‌ಟರ್ ನ್ಯಾಷನಲ್, ಬೆಂಗಳೂರು-1

3) ಶ್ರೀ ಎನ್.ಆರ್. ಜಗದೀಶ್ ಅವರು, ಕೈಗಾರಿಕೋದ್ಯಮಿಗಳು, ಸಿದ್ಧಗಂಗಾ ಆಯಿಲ್ ಎಕ್ಸಾಸ್ಟ್ರ್ಯಾಕ್ಷನ್, ತುಮಕೂರು.
4) ಪದ್ಮಶ್ರೀ ಆರ್ ಎಂ.ಬಿ. ಆರಾಧ್ಯರು, ಕೈಗಾರಿಕೋದ್ಯಮಿಗಳು, ವಿಶ್ವನಾಥರಾವ್ ರಸ್ತೆ, ಮಾಧವನಗರ, ಬೆಂಗಳೂರು.1
5) ಶ್ರೀ ಹೆಚ್. ಶಿವಲಿಂಗಯ್ಯನವರು, ಚಾರ್ಟೆಡ್ ಅಕೌಂಟೆಂಟ್, 'ಶಿವಕೃಪ' ನಂ.21 ಪ್ಯಾಲೇಸ್‌ರಸ್ತೆ, ಬೆಂಗಳೂರು-560052.
6) ಶ್ರೀ ಹೆಚ್.ಎಂ. ಗಂಗಾಧರಯ್ಯ, ಕಾರ್ಯದರ್ಶಿಗಳು, ಶ್ರೀ ಸಿದ್ಧಾರ್ಥ ಶಿಕ್ಷಣ ವಿದ್ಯಾಸಂಸ್ಥೆ, ಮರಳೂರು, ತುಮಕೂರು ತಾ॥

## 2 ಐದು ಕೊಠಡಿಗಳ ನಿರ್ಮಾಣಕ್ಕೆ ವಂತಿಕೆ ಸಂಗ್ರಹಿಸಿ ಕಟ್ಟಿಸಿಕೊಡುವ ಮಹನೀಯರುಗಳು.

1) ಶ್ರೀ ಸಾಗರನಹಳ್ಳಿ ರೇವಣ್ಣನವರು, ಮಾಜಿಸಚಿವರು, ಸಾಗರನಹಳ್ಳಿ, ಗುಬ್ಬಿ ತಾ॥
2) ಶ್ರೀ ಎ.ಎಂ. ಬಸವೇಗೌಡರು, ಪ್ಲಾಂಟರ್ಸ್, ಚಿಕ್ಕಮಗಳೂರು.
3) ಶ್ರೀ ಮಂಜರಾಬಾದ್, ಪ್ರದೇಶದ ಭಕ್ತಾದಿಗಳು.
4) ಸಿ.ಆರ್. ಪ್ರಭಣ್ಣ ಅಂಡ್ ಸನ್ಸ್, ಹಾರ್ಡ್‌ವೇರ್ ಮರ್ಚೆಂಟ್ಸ್, ಮಂಡಿಪೇಟೆ ತುಮಕೂರು.

## 3. ಮೂರು ಕೊಠಡಿಗಳನ್ನು ಉದಾರವಾಗಿ ಕಟ್ಟಿಸಿಕೊಡುವ ದಾನಿಗಳು.

1) ಶ್ರೀಮತಿ ಮತ್ತು ಶ್ರೀ ಕೆ.ಎ. ನಂಜಪ್ಪಗೌಡ ಇವರ ಹೆಸರಿನಲ್ಲಿ ಶ್ರೀಮತಿ ಮತ್ತು ಶ್ರೀ ಕೆ.ಎನ್. ಮಲ್ಲಪ್ಪ, ಕೆಂಚಾಂಬ ಫ್ಯಾಮಿಲಿ, ಬಳೇರ ಕೊಪ್ಪಲು, ಎಸ್ಟೇಟ್ ಆಲೂರು ತಾ॥ ಹಾಸನ ಜಿಲ್ಲೆ.
2) ಶ್ರೀ ಬರ್ಮಯ್ಯ ಶಾಹೀರ್, ಶರಣ ಸಮಾಜ ಮತ್ತು ಅವರ ಮಾವಂದಿರ ಹೆಸರಿನಲ್ಲಿ

## 4 ಎರಡು ಕೊಠಡಿಗಳನ್ನು ಉದಾರವಾಗಿ ಕಟ್ಟಿಸಿ ಕೊಡುವ ದಾನಿಗಳು

1) ಶ್ರೀ ದಯಾನಂದ ಪೈ, ಬೆಂಗಳೂರು
2) ಶ್ರೀ ವಿಶ್ವಾರಾಧ್ಯರು, ಅಧ್ಯಕ್ಷರು, ಬಾಪೂಜಿ ಡೆಂಟಲ್ ಕಾಲೇಜು, ದಾವಣಗೆರೆ
3) ಶ್ರೀ ಪ್ರಭಾಕರ್ ಕೋರೆ, ಅಧ್ಯಕ್ಷರು, ಕೆ.ಎಲ್.ಇ. ಸೊಸೈಟಿ, ಬೆಳಗಾಂ
4) ಶ್ರೀ ಎಲ್. ರಾಜಪ್ಪನವರು, ಕಂಟ್ರಾಕ್ಟರ್ 924, 4ನೇ ಬ್ಲಾಕ್ 2ನೇ ಮುಖ್ಯರಸ್ತೆ, ರಾಜಾಜಿನಗರ, ಬೆಂಗಳೂರು

## 5 ತಲಾ ಒಂದು ಕೊಠಡಿಯನ್ನು ನಿರ್ಮಿಸಿಕೊಡಲು ವಾಗ್ದಾನಮಾಡಿರುವ ಮಹನೀಯರುಗಳು

1) ಅಥಣಿ ವೀರಣ್ಣನವರು, ಆಡಿಟರ್, ದಾವಣಗೆರೆ
2) ಶ್ರೀ ಅಬ್ರೆಫ್ ಅವರು, ರಾಜಾ ಟೈಲ್ಸ್ ವರ್ಕ್ಸ್, ಜೆ.ಸಿ. ರೋಡ್, ತುಮಕೂರು.
3) ಶ್ರೀ ವಿ.ಎಲ್. ಶಿವಪ್ಪನವರು, ಮಾಜಿ ಶಾಸಕರು, ತಿಪಟೂರು ಅಂಚೆ, ತಿಪಟೂರು
4) ಶ್ರೀ ಕೆ. ಎಸ್. ರಾಜಶೇಖರ್ ಅವರು, ವಕೀಲರು, ಗಾಂಧಿನಗರ, ತುಮಕೂರು.
5) ಶ್ರೀ ಎ.ಎಂ. ಬಸವೇಗೌಡರು, ಕಾಫಿ ಪ್ಲಾಂಟರ್, ತಿಪ್ಪನಹಳ್ಳಿ, ಕೈಮಾರ ಅಂಚೆ ಚಿಕ್ಕಮಗಳೂರು ತಾಲ್ಲೂಕು.
6) ಶ್ರೀ ರೇವಣ್ಣ ಸಿದ್ದಪ್ಪನವರು, ಕಂಟ್ರಾಕ್ಟರ್, ನಂ. 960, 4ನೇ ಬ್ಲಾಕ್, 2ನೇ ಮುಖ್ಯರಸ್ತೆ, ರಾಜಾಜಿನಗರ, ಬೆಂಗಳೂರು
7) ಶ್ರೀ ಡಿ. ಚಂದ್ರಶೇಖರಯ್ಯ ಕಂಟ್ರಾಕ್ಟರ್, ನಂ. 970, ಮಹಾಮನೆ, 4ನೇ ಬ್ಲಾಕ್, 2ನೇ ಮುಖ್ಯರಸ್ತೆ, ರಾಜಾಜಿನಗರ, ಬೆಂಗಳೂರು
8) ಡಾ॥ ಬಿ. ಶಿವಪ್ಪನವರು, ನಂ. 438, "ಮಲ್ಲಿಗೆ" ರಾಜಮಹಲ್ ವಿಲಾಸ ಎಕ್ಸ್‌ಟೆನ್‌ಷನ್, ಸದಾಶಿವನಗರ, ಬೆಂಗಳೂರು - 50
9) ಶ್ರೀ ಬಿ. ಎಸ್. ದೇವರಾಜ್ ಅವರು, ಮಾಲೀಕರು, ಆಶ್ರಯ ಇಂಟರ್ ನ್ಯಾಶನಲ್ ಹೋಟೆಲ್, ಇನ್ ಫೆಂಟರಿ ರಸ್ತೆ, ಬೆಂಗಳೂರು - 1
10) ಶ್ರೀ ಸಾರ್ವೆ ಮಹಾಂತಗೌಡರು, ಕಾಫಿಪ್ಲಾಂಟರ್ಸ್, ಸಕಲೇಶಪುರ ತಾ॥
11) ಶ್ರೀ ಬಿ. ರಾಜಶೇಖರ್ ಮತ್ತು ಶ್ರೀ ಬಿ. ಮಲ್ಲಣ್ಣ, ಗುಡ್ಡದಮನೆ ಅವರುಗಳು ಲಕ್ಷ್ಮೀಪುರ ಬಡಾವಣೆ, ಸಕಲೇಶಪುರ
12) ಶ್ರೀ ಎಸ್. ಚೆನ್ನಬಸಪ್ಪನವರು, "ಚೇತನ್", 506, 10ನೇ ಕ್ರಾಸ್, ರಾಜಮಹಲ್ ವಿಲಾಸ ಬಡಾವಣೆ, ಸದಾಶಿವ ನಗರ, ಬೆಂಗಳೂರು - 50
13 ಶ್ರೀಮತಿ ಗೌರಮ್ಮ ಡಾ॥ ಶ್ರೀ ಟಿ. ತಿಪ್ಪೇಸ್ವಾಮಿಅವರು, ನಿವೃತ್ತ ಪ್ರಾಂಶುಪಾಲರು "ಮಾತೃಕೃಪ" ತ್ಯಾಗರಾಜನಗರ, ಚಳ್ಳಕೆರೆ - 577522
14) ಶ್ರೀ ಜಿ. ಎಂ. ಚಿಕ್ಕವೀರಣ್ಣನವರು, ಚನ್ನಮ್ಮನ ಪಾಳ್ಯ, ಗುಬ್ಬಿ ತಾಲ್ಲೂಕು. ತುಮಕೂರು ಜಿಲ್ಲೆ
15) ಜಿ.ಎಸ್. ಶಿವಣ್ಣ, ಗಂಗನಪಾಳ್ಯ ರಘುವನಹಳ್ಳಿ ಸಮೀಪ, ಕಲಘಟ್ಟಪುರ ಅಂಚೆ ಬೆಂಗಳೂರು - 560062
16) ಶ್ರೀ ಬಸವರಾಜಪ್ಪನವರು, S/o ಸಿದ್ಧಗಂಗಯ್ಯ, ಲಕ್ಷ್ಮೀಪುರ ಮತ್ತು ಅಂಚೆ ನೆಲಮಂಗಲ ತಾಲ್ಲೂಕು, ಬೆಂಗಳೂರು - 562123

17) ಶ್ರೀ ಬಿ. ಶಾಂತರಾಜುಅವರು, ಕಾಫಿ ಪ್ಲಾಂಟರ್ಸ್, ನಂ. 22, ಬಿ.ಎಂ. ರಸ್ತೆ, ಸಕಲೇಶಪುರ ಟೌನ್
18) ಶ್ರೀ ಜಿ ಎಸ್. ಬಸವರಾಜುಅವರು, ಮಾಜಿ ಲೋಕಸಭಾ ಸದಸ್ಯರು, ಗಾಂಧಿನಗರ ತುಮಕೂರು
19) ಶ್ರೀ ಲಕ್ಷ್ಮೀನರಸಿಂಹಯ್ಯನವರು, ಮಾಜಿ ಸಚಿವರು, ಕಮಲ ಎಲೆಕ್ಟ್ರಿಕಲ್ಸ್, ಆಶೋಕ ರಸ್ತೆ, ತುಮಕೂರು
20) ಶ್ರೀ ಎಸ್. ಮುದ್ದಪ್ಪನವರು ಮತ್ತು ಮಕ್ಕಳು ಅಲಸೂರು, ಬೆಂಗಳೂರು
21) ಡಾ॥ ಎಂ.ಸಿ. ಮೋದಿ ಟ್ರಸ್ಟ್ ನಂ. 1, ಡಬ್ಲ್ಯೂ.ಸಿ ಆರ್., ಎರಡನೇ ಹಂತ ರಾಜಾಜಿನಗರ, ಬೆಂಗಳೂರು - 560086
22) ಶ್ರೀ ಬಿ. ಎಂ. ಚಂದ್ರಶೇಖರ್, ಸಕಲೇಶಪುರ
23) ಶ್ರೀಮತಿ ಮನೋಹರಮ್ಮ ಬಸವಣ್ಣ ಅವರು, ಸಕಲೇಶಪುರ
24) ಶ್ರೀ ಎಸ್. ಶಿವಪ್ರಸಾದ ಜ್ಯೋತಿಅವರು, ನಂ. 11, ಶಿರಸಿ ರಸ್ತೆ, ಚಾಮರಾಜಪೇಟೆ, ಬೆಂಗಳೂರು
25) ಶ್ರೀ ಎಂ. ಶಿವಪ್ಪ ಅಡ್ವೊಕೇಟ್, ಟ್ಯಾಂಕ್ ಬಂಡ್ ರಸ್ತೆ, ಬೆಂಗಳೂರು - 9
26) ಎಂ. ಎಸ್. ಪರಮಶಿವಪ್ಪನವರು' ರೇಣುಕಾ ಎಸ್ಟೇಟ್, ಅಂಕಿಹಳ್ಳಿ ಪೋಸ್ಟ್ ಬೇಲೂರು ತಾಲ್ಲೂಕು, ಹಾಸನ ಜಿಲ್ಲೆ
27) ಶ್ರೀ ಬಿ. ವೀರಭದ್ರಪ್ಪನವರು, ಅಡ್ವೊಕೇಟ್ ಗುರುಕೃಪ ನಂ. 301 ಶ್ರೀಕಂಠನ್ ಲೇಔಟ್, 1ನೇ ಮುಖ್ಯ ರಸ್ತೆ, ಹೈಗ್ರೌಂಡ್ಸ್, ಬೆಂಗಳೂರು - 1
28) ಶ್ರೀಮತಿ ಚನ್ನಮ್ಮ ಮತ್ತು ಚಿಕ್ಕವೀರಪ್ಪ ರಘುವನಹಳ್ಳಿ, ತಲಘಟ್ಟಪುರ ಅಂಚೆ ಬೆಂಗಳೂರು - 560062
29) ಶ್ರೀಮತಿ ಮಲ್ಲಮ್ಮ w/o ಟಿ. ಎಸ್. ಶಂಕರಪ್ಪ, ನಂ. ಜೆ-3, 3ನೇ ಮಹಡಿ, ಪ್ರಭುದೇವ ಬಿಲ್ಡಿಂಗ್, ಬೆಂಗಳೂರು

**ಯೋಜಿತ ಮಹಾಪ್ರಸಾದ ನಿಲಯದ ಕಟ್ಟಡಕ್ಕೆ ವಾಗ್ದಾನ ಮಾಡಿರುವ ದಾನಿಗಳು ತಲಾ ಹತ್ತುಸಾವಿರ ರೂಗಳಂತೆ**

1) ಡಾ॥ ಬಿ. ಎಸ್. ಶಿವಪ್ಪ, ನಂ. 438, 'ಮಲ್ಲಿಗೆ' ರಾಜ್‌ಮಹಲ್ ವಿಲಾಸ್ ಬಡಾವಣೆ ಸದಾಶಿವನಗರ ಬೆಂಗಳುರು-50
.) ಬಿ.ಎಸ್. ಬಸವರಾಜ್ ಮಾಲೀಕರು, ಆಶ್ರಯ ಇಂಟರ್‌ನ್ಯಾಷನಲ್ ಹೋಟೆಲ್, ಇನ್‌ಫೆಂಟರಿ ರಸ್ತೆ, ಬೆಂಗಳೂರು-1
3) ಶ್ರೀಮತಿ ರತ್ನಮ್ಮ ಬಿ. ರಾಜಶೇಖರ್, ಕಾಫಿ ಪ್ಲಾಂಟರ್, ಗುಡ್ಡದಮನೆ ಲಕ್ಷ್ಮೀಪುರ ಬಡಾವಣೆ, ಸಕಲೇಶಪುರ.
4) ಶ್ರೀಮತಿ ಮಲ್ಲಮ್ಮ W/o ಟಿ. ಎ. ಶಂಕರಪ್ಪ, ನಂ. ಜೆ-3, 2ನೇ ಮಹಡಿ, ಪ್ರಭುದೇವ ಬಿಲ್ಡಿಂಗ್ ಮಲೇಶ್ವರಂ ಬೆಂಗಳೂರು-3
[ಶ್ರೀ ಬಸವರಾಜು, ಮಾಲೀಕರು ಲಕ್ಷ್ಮಿ ಲಾಡ್ಜ್ ಬೆಂಗಳೂರು-9]



ಪೂಜ್ಯ ಶ್ರೀ ಶ್ರೀಗಳವರು ತಮ್ಮ ಪೂಜ್ಯ ಗುರುಗಳಾದ ಉದ್ದಾನ ಶಿವಯೋಗಿಗಳ ಕೃಪೆಯಿಂದ ಮತ್ತು ಜನತೆಯ ಸಹಕಾರದಿಂದ 60 ವರ್ಷಗಳ ಸೇವಾ ಕಾರ್ಯ ಮುಂದುವರಿಯುತ್ತಾ ಬರುತ್ತಿದೆ ಎಂದು ಸ್ಮರಿಸಿ ಮಾತನಾಡುತ್ತಿರುವುದು. ಚಿತ್ರದ ಎಡ ತುದಿಯಲ್ಲಿ ವಜ್ರಮಹೋತ್ಸವದ ಕಾರ್ಯಾಧ್ಯಕ್ಷರಾದ ಶ್ರೀ ಬಿ.ಎಚ್. ಮುದ್ದಪ್ಪ, ಐ.ಎ.ಎಸ್ ಇವರನ್ನು ಕಾಣಬಹುದು.



ಶ್ರೀಮಠದ ಹಳೆಯ ವಿದ್ಯಾರ್ಥಿ ಸಂಘದ ಪ್ರಧಾನ ಕಾರ್ಯದರ್ಶಿಗಳಾದ ಡಾ|| ಎಂ.ಎಸ್. ಚನ್ನಬಸಪ್ಪನವರು ಪೂರ್ವ ಸಿದ್ಧತಾ ಸಭೆ ರೂಪಿಸಿದ ಯೋಜನೆಗಳಿಗೆ ಉದಾರವಾಗಿ ಸಹಾಯ ನೀಡಬೇಕೆಂದು ಮನವಿ ಮಾಡಿಕೊಳ್ಳುತ್ತಿರುವುದು.